# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

'एतज्ज्ञेयं नित्यमेवाऽऽत्मसंस्थं नातःपरं वेदितव्यं हि किञ्चित्'

ಸಂಪುಟ ೫೬ ಸೆಪ್ಟೆಂಬರ್ ೧೯೮೬ ಸಂಚಿಕೆ ೧

## ವಿಷಯಗಳು


| | |
|---|---|
| ದಹರಾತ್ಮನ ಲಕ್ಷಣ | ೧ |
| ಅಧ್ಯಾತ್ಮಸಂದೇಶ | ೨ |
| ಸಾಮಾನ್ಯನೀತಿ | ೬ |
| ಸತ್ಯಕಾಮನ ಪತ್ರಗಳು | ೭ |
| ಆರಿಸಿದ ಅರಳುಮೊಗ್ಗುಗಳು | ೯ |
| ವಾಯುದೇವರು | ೧೦ |
| ಗ್ರಂಥಪರಿಚಯ | ೧೧ |
| ಜೀವಾತ್ಮನ ಅವಸ್ಥಾಭೇದಗಳು | ೧೨ |
| ಶ್ರೀಶ್ರೀಗಳವರ ಸಾರಸ್ವತಸೇವೆ | ೧೬ |
| ಸರಸ್ವತೀಸೂಕ್ತಭಾಷ್ಯ | |
| ಗುರುಶಿಷ್ಯಸಂವಾದ | |
| ಹೇಳುವದು, ಮಾಡುವದು | |




ಪತ್ರಿಕೆಯ ಚಂದಾ

ವರ್ಷಕ್ಕೆ

ರೂ. ೧೫-೦೦

ಪೋಷಕರಿಗೆ ರೂ. ೨೦-೦೦

ಮಹಾಪೋಷಕರಿಗೆ ರೂ. ೧೫೧-೦೦




ಹೊಸ ಸಂಪುಟಕ್ಕೆ
ಚಂದಾಹಣವನ್ನು
ಈಗಲೇ ಕಳುಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ:

ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

September-1986

# ಕಾರ್ಯಾಲಯದ ಸುದ್ದಿ

**ಪತ್ರಿಕೆ :** ಹೊಸಸಂಪುಟಕ್ಕೆ ಅನೇಕ ಮಹನೀಯರು ತಮ್ಮ ಚಂದಾಹಣ, ಪೋಷಣದ್ರವ್ಯಗಳನ್ನು ಕಳುಹಿಸಿದ್ದಾರೆ. ಈಗಲೂ ಕಳುಹಿಸುತ್ತಿದಾರೆ. ದಯ ಮಾಡಿ ಒಬ್ಬೊಬ್ಬ ಹೊಸಚಂದಾದಾರರನ್ನೂ ಕೂಡಿಸಿಕೊಟ್ಟು ಪ್ರೋತ್ಸಾಹಿಸ ಬೇಕಾಗಿ ಪ್ರಾರ್ಥನೆ.

**ಶ್ರೀಶ್ರೀ ಆರಾಧನೆ :** ತಾ॥ 3-8-86ನೇ ಭಾನುವಾರದಂದು ಗೊತ್ತಾಗಿದ್ದ ಕಾರ್ಯಕ್ರಮದಂತೆ ಶ್ರೀಶ್ರೀ ಆರಾಧನೋತ್ಸವವು ಬಹಳ ವಿಜೃಂಭಣೆಯಿಂದ ನಡೆಯಿತು. ಆ ದಿನ ಬೆಳಗ್ಗೆ ಶ್ರೀ ದಿಗ್ವಿಜಯರಾಮದೇವರಿಗೆ ವಿಶೇಷಪೂಜಾಲಂಕಾರ ಗಳೂ ಶ್ರೀಶ್ರೀ ಮಹಾಸಮಾಧಿಯ ಸನ್ನಿಧಿಯಲ್ಲಿ ರುದ್ರಾಭಿಷೇಕಾರ್ಚನಾದಿಗಳೂ ಅನಂತರ ವೈದಿಕವಿದ್ವನ್ಮಣಿಗಳಿಂದ ಪವಮಾನಹೋಮವೂ ನೆರವೇರಿತು. ಮಧ್ಯಾಹ್ನ ೧೨ ಘಂಟೆಯಿಂದ ವೈದಿಕಾರಾಧನೆಯೂ ಅದೇ ಕಾಲದಲ್ಲಿ ಭಕ್ತರ ಸಮ್ಮುಖದಲ್ಲಿ ಬೆಂಗಳೂರಿನ ಶ್ರೀ ತೇರಾಕೋಟೆ ಚಂದ್ರಶೇಖರಯ್ಯ ಪಾರ್ಟಿಯವ ರಿಂದ ಸಂಗೀತಭಜನೆಯೂ ಸುಶ್ರಾವ್ಯವಾಗಿ ನೆರವೇರಿತು. ಮಧ್ಯಾಹ್ನ ೨ ಘಂಟೆಗೆ ಮಹಾಮಂಗಲಾರತಿಯೂ ಅನಂತರ ಸಮಸ್ತಭಕ್ತವೃಂದಕ್ಕೂ ಅನ್ನಸಂತರ್ಪಣೆ ಯೂ ನಡೆಯಿತು.

ಸಂಜೆ 6 ಘಂಟೆಗೆ ಪ್ರಾರಂಭವಾದ ವಿದ್ವತ್‌ಸಭೆಗೆ ಮೈಸೂರಿನಿಂದ ಶ್ರೀ॥ ಪ್ರೊ. ಎಸ್. ಎಸ್. ರಾಘವಾಚಾರ್ಯರೂ ಬೆಂಗಳೂರಿನಿಂದ ಪ್ರೊ. ಎ. ಸತ್ಯ ನಾರಾಯಣಶಾಸ್ತ್ರಿಗಳೂ ಮುಖ್ಯ ಅತಿಥಿಗಳಾಗಿ ದಯಮಾಡಿಸಿದ್ದರು. ಸಕಲೇಶ ಪುರ- ಹಾರ್ಲೆ ಎಸ್ಟೇಟ್ ಮಾಲೀಕರಾದ ಶ್ರೀ॥ ಎನ್. ಕೆ. ಗಣಪಯ್ಯನವರು ಅಧ್ಯಕ್ಷತೆ ವಹಿಸಿದ್ದರು. (೧) ಛಾಂದೋಗ್ಯೋಪನಿಷದ್ಭಾಷ್ಯ (೨) ಸೌರಸೂಕ್ತ ಭಾಷ್ಯ- ಈ ಎರಡು ಗ್ರಂಥಗಳ ಬಿಡುಗಡೆಯಾಯಿತು. ಮುಖ್ಯಅತಿಥಿಗಳಿಬ್ಬರೂ ಶ್ರೀಶ್ರೀಗಳವರ ಗುಣಗಾನಮಾಡಿ ಉಪನ್ಯಾಸಗಳನ್ನು ಮಾಡಿದರು. ಕಾರ್ಯದರ್ಶಿ ಗಳು ವರದಿಯನ್ನೂ ಸಂಸ್ಥೆಯ ಅಧ್ಯಕ್ಷರು ಹಣಕಾಸುಪರಿಸ್ಥಿತಿಯನ್ನೂ ಸಭೆಯ ಮುಂದಿಟ್ಟರು. ವಂದನಾರ್ಪಣೆಯ ಅನಂತರ ಸಭೆ ಮುಕ್ತಾಯವಾಗಿ ಮಹಾಮಂಗ ಲಾರತಿಯಾದಮೇಲೆ ಆರಾಧನೋತ್ಸವವು ಪೂರ್ಣಗೊಂಡಿತು. ಸ್ಥಳಪರಸ್ಥಳಗಳಿಂದ ವಿಶೇಷವಾಗಿ ಭಕ್ತರುಗಳು ದಯಮಾಡಿಸಿ ಉತ್ಸವವನ್ನು ಯಶಸ್ವಿಗೊಳಿಸಿದರು.

**ಗ್ರಂಥಮುದ್ರಣ :** 'ಭಗವದ್ಗೀತೆಯ ಉಪನ್ಯಾಸಗಳು' ಎಂಬ ಗ್ರಂಥದ ಮುದ್ರಣವನ್ನಾರಂಭಿಸಿದೆ. ಈವರೆಗೆ ೩೨ ಪುಟಗಳಾಗಿವೆ. ಈಚೆಗೆ ಮುದ್ರಿತ ವಾಗಿರುವ ಕೆಲವು ಗ್ರಂಥಗಳು ಬೈಂಡಾಗುತ್ತಿವೆ.

**ಸ್ವತಂತ್ರಪುಟಗಳು :** ಸಂಪಾದಕಮಂಡಳಿಯವರ ಇತ್ತೀಚಿನ ತೀರ್ಮಾನ ದಂತೆ 'ಅಧ್ಯಾತ್ಮಶಂಕರವಿಜಯ'ದ ಪ್ರಕಟನೆಯನ್ನು ನಿಲ್ಲಿಸಲಾಗಿದೆ. ಆಸಕ್ತ ವಾಚಕರಲ್ಲಿ ಕ್ಷಮೆಬೇಡಲಾಗಿದೆ. ಇನ್ನುಮುಂದೆ ಹೊಸ ಅಧ್ಯಾತ್ಮಗ್ರಂಥವೊಂದನ್ನು ಸಿದ್ಧಗೊಳಿಸಿ ಸ್ವತಂತ್ರಪುಟಗಳನ್ನು ಭರ್ತಿಹಾಕಿಕೊಡುವ ಬಗ್ಗೆ ಪ್ರಯತ್ನಿಸಲಾಗು ವದು. ವಿಳಂಬವನ್ನು ಮನ್ನಿಸಬೇಕು.

**ಸಂಪಾದಕರು :** ಆರೋಗ್ಯವಾಗಿದ್ದು ಸ್ಥಳದಲ್ಲಿರುತ್ತಾರೆ.

---

# ಅಧ್ಯಾತ್ಮ ಪ್ರಕಾಶ



ಸಂಪುಟ ೫೬] ವರ್ಷಕ್ಕೆ ರೂ. ೧೫-೦೦ ; ಬಿಡಿ ಸಂಚಿಕೆಗೆ : ರೂ. ೧.೨೫ [ಸಂಚಿಕೆ ೧

ಸೆಪ್ಟೆಂಬರ್-1986

(ಶ್ರೀ ಅಕ್ಷಯಸಂವತ್ಸರದ ಭಾದ್ರಪದ)

## ದಹರಾತ್ಮನ ಲಕ್ಷಣ

**ಓಂ ॥ ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪೋ ಯಥಾ ಹ್ಯೇವೇಹ ಪ್ರಜಾ ಅನ್ವಾವಿಶಂತಿ ॥**

—ಛಾಂದೋಗ್ಯೋಪನಿಷತ್ತು ೮-೧-೫

**ಭಾವಾರ್ಥ :-** ಈ ಆತ್ಮನು ಅಪಹತಪಾಪ್ಮನೂ ಮುಪ್ಪಿಲ್ಲದವನೂ ಸಾವಿಲ್ಲದವನೂ ಶೋಕವಿಲ್ಲದವನೂ ಹಸಿವಿಲ್ಲದವನೂ ಬಾಯಾರಿಕೆಯಿಲ್ಲದವನೂ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನು. ಹೇಗೆಂದರೆ ಪ್ರಜೆಗಳು (ತನ್ನ ಒಡೆಯನು ಗೊತ್ತುಪಡಿಸಿದಷ್ಟನ್ನು ಭೋಗಿಸುವಂತೆ ಆತ್ಮನನ್ನು ಅರಿಯದವರು) ಅಸ್ವತಂತ್ರರಾಗಿದ್ದುಕೊಂಡಿರುವರು.

[ಹೃದಯಾಕಾಶದಲ್ಲಿರುವ ಆತ್ಮನು ಪರಬ್ರಹ್ಮವೇ ಆಗಿದ್ದು ಸತ್ಯಕಾಮಾದಿಗುಣಗಳುಳ್ಳವನಾಗಿದ್ದರೂ ಅವನನ್ನು ಅರಿತುಕೊಳ್ಳದವರು ಪರಾಧೀನರಾದ ಪ್ರಜೆಗಳಂತೆ ಮಿತವಾದ ಭೋಗಗಳನ್ನು ಅನುಭವಿಸುತ್ತಾ ಅತೃಪ್ತರೂ ಅಸುಖಿಗಳೂ ಆಗಿರುವರು- ಎಂದಭಿಪ್ರಾಯ.]

---

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ದಹರಬ್ರಹ್ಮೋಪಾಸನೆ

ವಾಚಕಮಹಾಶಯರಿಗೆ ವಂದನೆಗಳು. ಹೊಸಸಂಪುಟದಲ್ಲಿಯೂ ಅಧ್ಯಾತ್ಮ ಸಂದೇಶಗಳು ಛಾಂದೋಗ್ಯೋಪನಿಷತ್ತಿನ ಎಂಟನೆಯ ಅಧ್ಯಾಯದ ವಿಷಯಗಳನ್ನು ಅಧಿಕರಿಸಿಯೇ ಮುಂದುವರೆಯುತ್ತವೆ. ಉಪನಿಷತ್ಸಂದೇಶಗಳು ಯಾವಾಗಲೂ ನೂತನವಾಗಿಯೇ ಇರುವವು. ಅವುಗಳನ್ನು ಮನನಮಾಡಿದಂತೆಲ್ಲ ನಾವು ಬ್ರಹ್ಮಾನುಭವಕ್ಕೆ ಹತ್ತಿರವಾಗುತ್ತಾಹೋಗುವೆವು. ನಮ್ಮ ಆತ್ಮನು ಪರಬ್ರಹ್ಮವೇ -ಎಂಬುದು ಅವುಗಳ ಒಕ್ಕೊರಲಿನ ಉಪದೇಶವಾಗಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಈಗಾಗಲೆ ಈ ವಿಷಯವನ್ನು ಸವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ. ಈಗ ಬ್ರಹ್ಮವನ್ನು ಪ್ರತಿಯೊಬ್ಬನೂ ತನ್ನ ಹೃದಯಾಕಾಶದಲ್ಲಿ ಚಿಂತಿಸಬೇಕಾದ ಕ್ರಮವನ್ನು ತಿಳಿಸುವದಕ್ಕಾಗಿ ದಹರೋಪಾಸನಾಪ್ರಕರಣವನ್ನು ಆರಂಭಿಸಲಾಗಿದೆ. ಶಿಷ್ಯಾಚಾರ್ಯರ ಸಂವಾದರೂಪವಾಗಿ ಉಪಕ್ರಮವಾಗಿರುವ ಈ ಪ್ರಕರಣದಲ್ಲಿ ಆಚಾರ್ಯನು ದಹರ(ಅಲ್ಪ)ವಾದ ಹೃದಯಾಕಾಶದಲ್ಲಿ ಒಳಗೆ ಅಡಗಿರುವ ತತ್ತ್ವವನ್ನು ಹುಡುಕಬೇಕೆಂದೂ ಅದನ್ನೇ ವಿಚಾರಮಾಡಬೇಕೆಂದೂ ತಿಳಿಸಿರುತ್ತಾನೆ. ಆದರೆ ಈ ವಿಷಯದಲ್ಲಿ ಶಿಷ್ಯರಿಗೆ ಇನ್ನೂ ಕೆಲವು ಸಂಶಯಗಳು ನಿವಾರಣೆಯಾಗಿಲ್ಲ. ಅವುಗಳನ್ನು ಈಗ ಪ್ರಸ್ತಾಪಿಸಲಾಗುವದು.

ಮೊದಲನೆಯದಾಗಿ 'ಅಲ್ಪವಾದ ಹೃದಯಾಕಾಶದಲ್ಲಿ ಏನಿದ್ದೀತು?' ಎಂದು ಶಿಷ್ಯರು ಕೇಳಿದ್ದರು. ಆಚಾರ್ಯನು 'ಹೃದಯವೆಂಬ ಉಪಾಧಿಯು ಅಲ್ಪವಾಗಿರುವದು ನಿಜ. ಆದರೆ ಅದರಲ್ಲಿರುವ ಬ್ರಹ್ಮವು ಅಲ್ಪವಲ್ಲ; ಅದು ಇಡಿಯ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದೆ' ಎಂದು ತಿಳಿಸಿದ್ದನು. ಈಗ ಶಿಷ್ಯರು ಕೇಳುವದೇನೆಂದರೆ : "ಪೂಜ್ಯರೆ, ಹೃದಯವು ಶರೀರದಲ್ಲಿದೆ; ಶರೀರವಾದರೋ ಪರಿಣಾಮವನ್ನು ಹೊಂದುತ್ತಲೇ ಇರುವದು. ಕಡೆಗೆ ಒಂದು ದಿನ ಮಣ್ಣುಪಾಲಾಗುವದು ; ಅಥವಾ ಬೆಂಕಿಯ ಪಾಲಾಗುವದು. ಆಗ ಹೃದಯವೂ ತದಂತರ್ಗತವಸ್ತುವೂ ನಾಶವಾಗುವದಲ್ಲವೆ ? ಆಗ ಉಳಿಯುವದಾದರೂ ಏನು? ನಾವು ಏನನ್ನು ಚಿಂತಿಸಬೇಕೋ ಅದು ಅನಿತ್ಯವೇ ಆದರೆ ಚಿಂತಿಸಿ ಫಲವೇನು ?' ಎಂಬುದು ಅಂತೇವಾಸಿಗಳ ಪ್ರಶ್ನೆಯಾಗಿರುತ್ತದೆ. ಇದು ನಿಜವಾಗಿಯೂ ನಾವೆಲ್ಲರೂ ಕೇಳುವ ಪ್ರಶ್ನೆಯೇ ಆಗಿದೆ. ವ್ಯವಹಾರದೃಷ್ಟಿಯಿಂದ 'ನಾನು' ಎಂದರೆ ದೇಹವನ್ನೇ ಎಲ್ಲರೂ ಗ್ರಹಿಸುತ್ತಾರೆ. ದೇಹವನ್ನು ಒಂದು ಮನೆಯಂತೆ ಎಂದು ಭಾವಿಸಿದಾಗಲೂ ಮನೆಗೆ ನಾಶವುಂಟಾದರೆ ಮನೆಯಲ್ಲಿರುವದೆಲ್ಲವೂ ನಾಶವಾಗಲೇಬೇಕಲ್ಲವೆ ? ಆಗ ದಹರಾಕಾಶವಾದರೂ ಉಳಿದೀತೇ ? ಎಂಬಿದು ಪ್ರಶ್ನೆಯ ಸಾರವು. ಇದನ್ನೇ ಅರ್ಜುನನೂ ಗೀತೆಯಲ್ಲಿ ಪ್ರಸ್ತಾಪಿಸಿರು

ತ್ತಾನೆ. ಭೀಷ್ಮಾದಿಗಳನ್ನು ಸಂಹರಿಸಿಬಿಟ್ಟರೆ ಅವರು ನಿತ್ಯರೆಂಬುದು ಹೇಗಾದೀತು? ಎಂಬಂತೆಯೇ ಇಲ್ಲಿಯೂ ಪ್ರಶ್ನೆಯ ಅಭಿಪ್ರಾಯವನ್ನು ತಿಳಿಯಬೇಕು.

ಈಗ ಆಚಾರ್ಯನು ಉತ್ತರಕೊಡುತ್ತಿದ್ದಾನೆ. ಏನೆಂದರೆ "ಶಿಷ್ಯರೆ, ಹಾಗೆ ತಿಳಿಯಬೇಡಿರಿ. ಜರಾಮರಣಾದಿಗಳು ಕೇವಲ ದೇಹಧರ್ಮಗಳೇ ಹೊರತು ಆತ್ಮನ ಧರ್ಮವಲ್ಲ. ಉದಾಹರಣೆಗೆ ನಾಟಕದಲ್ಲಿ ಒಬ್ಬ ಗಂಡಸು ಹೆಂಗಸಿನ ವೇಷವನ್ನು ಧರಿಸಿದಾಗ ಅವನು ತೊಟ್ಟಿರುವ ಉಡುಪುಗಳು ಉಪಾಧಿಮಾತ್ರವೇ ಹೊರತು ಅವನ ಸ್ವರೂಪಕ್ಕೆ ಸೇರಿರುವದಿಲ್ಲ. ಆಗ್ಗೆ ಅವನೇನೂ ಹೆಂಗಸೇ ಆಗಿಬಿಡುವದಿಲ್ಲ. ಅಥವಾ ಕನಸಿನಲ್ಲಿ ಅವನು ಹೆಂಗಸಾಗಿ ವ್ಯವಹರಿಸಿ ಎಚ್ಚರವನ್ನು ಹೊಂದಿದರೆ ಕನಸಿನ ಇಡಿಯ ದೇಹವೇ ಅವನಲ್ಲ. ಆ ಕನಸಿನಲ್ಲಿದ್ದ ದೇಹವು ಈಗ ಅವನನ್ನು ಬಿಟ್ಟಗಲಿದರೂ ಅವನಿಗೇನೂ ಕೊರತೆಯು ಕಂಡುಬರುವದಿಲ್ಲ. ಏಕೆಂದರೆ ಆ ತೋರಿಕೆಯ ದೇಹವು ಎಂದೂ ಅವನಾಗಿರಲೇ ಇಲ್ಲ. ಕನಸಿನಲ್ಲಿ ಅದು ತಾನೆಂಬ ಅಭಿಮಾನವಿದ್ದುದು ಹೊರತು ನಿಜವು ಹಾಗಿರಲೇ ಇಲ್ಲ. ಅದರಂತೆಯೇ ಈ ದೇಹಗಳು ದೇಹಿಯಾದ ಆತ್ಮನಿಗೆ ಉಪಾಧಿಗಳು ಮಾತ್ರವೇ ಸರಿ. ಈ ದೇಹವು ಸವೆದರೆ ಆತ್ಮನು ಸವೆಯುವದಿಲ್ಲ. ಈ ದೇಹವು ತುಂಡುಮಾಡಲ್ಪಟ್ಟರೆ ಆತ್ಮನೇನೂ ತುಂಡರಿಸಲ್ಪಡುವದಿಲ್ಲ. ಒಂದು ಮನೆಯನ್ನು ಕೆಡವಿದಾಗ ಹೇಗೆ ಅದರಲ್ಲಿ ಅಡಗಿದ್ದ ಆಕಾಶಕ್ಕೆ ಏನೂ ಧಕ್ಕೆಯಾಗುವದಿಲ್ಲವೋ ಹಾಗೆಯೇ ದೇಹವು ಬಿದ್ದುಹೋದಾಗ ಆಕಾಶಕ್ಕಿಂತಲೂ ಸೂಕ್ಷ್ಮನಾದ ಆತ್ಮನಿಗೆ ಯಾವ ವಿನಾಶವೂ ಸಂಭವಿಸುವದಿಲ್ಲ. ಆದ್ದರಿಂದ ನೀವು ಬ್ರಹ್ಮಪುರವೆಂಬುದನ್ನು ಬ್ರಹ್ಮನು ವಾಸವಾಗಿರುವ ಪುರವು ಎಂದರ್ಥಮಾಡಿಕೊಳ್ಳಬೇಡಿರಿ. ಬ್ರಹ್ಮವೇ ಪುರವು ಎಂದರೆ ಪುರದಂತಿರುವ ದೇಹದಲ್ಲಿ ಕಂಡುಬರುವ ಬ್ರಹ್ಮನು ಅಥವಾ ಆತ್ಮನು ಯಾವಾಗಲೂ ನಿತ್ಯನೂ ಅವಿನಾಶಿಯೂ ಆಗಿರುವನೆಂದು ತಿಳಿಯಿರಿ. ಆ ಆತ್ಮನೇ ನಿಜವಾದ ನಿಮ್ಮ ಸ್ವರೂಪವು–ಎಂದರ್ಥ. ಹೀಗೆ ಉಪದೇಶಿಸಿದ ಬಳಿಕ ಆತ್ಮಸ್ವರೂಪವನ್ನು ಮತ್ತೊಮ್ಮೆ ಕೆಲವು ಲಕ್ಷಣಗಳಿಂದ ಆಚಾರ್ಯನು ವಿವರಿಸಲಿದ್ದಾನೆ. ಅದನ್ನೂ ನೋಡೋಣ.

ಆತ್ಮ ಅಥವಾ ಬ್ರಹ್ಮವು ಅಪಹತಪಾಪ್ಮನು. ಇಲ್ಲಿ ಬ್ರಹ್ಮೋಪದೇಶಕ್ಕಿಂತ ಆತ್ಮೋಪದೇಶವೇ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಏಕೆಂದರೆ ಜರಾಮರಣಾದಿದೋಷಗಳ ವಿಷಯದಲ್ಲಿ ನಮಗೆ ಹೆದರಿಕೆಯುಂಟಾಗಿರುವದು ನಮ್ಮ ಆತ್ಮನ ವಿಷಯಕ್ಕೇ ಆದ್ದರಿಂದ ಶ್ರುತಿಯು ನಮ್ಮ ಭ್ರಾಂತಿಯನ್ನು ಕಳೆಯುವದಕ್ಕಾಗಿ ಆತ್ಮನನ್ನು ಪಾಪಾದಿದೋಷಗಳಿಲ್ಲದವನೆಂದೇ ನಿರ್ದೇಶಿಸುತ್ತಿದೆ. ವ್ಯವಹಾರದಲ್ಲಿ ನಾವು 'ಪಾಪೋಽಹಂ ಪಾಪಕರ್ಮಾಽಹಂ' ಎಂದು ಹೇಳಿಕೊಳ್ಳುವದುಂಟು. ಶ್ರುತಿಯ ದೃಷ್ಟಿಯಲ್ಲಿ ಇದು ಸರಿಯಲ್ಲ. ಆದರೆ ನಮಗೆ ಅವಿದ್ಯೆಯಿರುವವರೆಗೂ ಶ್ರುತಿಯ ದೃಷ್ಟಿಯ ಉಪದೇಶವು ಅನುಭವಕ್ಕೆ ಬರುವಂತಿಲ್ಲ. ಇರಲಿ. ನಿಜವು ಮರೆಯಾಗಿದ್ದ ಮಾತ್ರಕ್ಕೆ ನಿಜವಲ್ಲದೆಹೋದೀತೆ? ಸೂತಪುತ್ರನೆಂದು ಕರ್ಣನನ್ನು ಕರೆದಮಾತ್ರಕ್ಕೆ ಅವನು ಕುಂತೀಪುತ್ರನಲ್ಲದೆಹೋದಾನೆ? ಹಾಗೆಯೇ ನಾವು ನಿಜವಾಗಿಯೂ

ಅಪಹತಪಾಪ್ಮರೇ ಆಗಿರುವೆವು. ನಮ್ಮ ಆತ್ಮನು ಪಾಪಪುಣ್ಯಗಳನ್ನು ದಾಟಿರು
ವವನೇ ಸರಿ. ಹಾಗೆಯೇ ಮುಪ್ಪಿಲ್ಲದವನು. ಏಕೆಂದರೆ ಮುಪ್ಪು ದೇಹಧರ್ಮವು.
'ನಾನು' ಎಂಬುದಕ್ಕೆ ಮೂಲಭೂತವಾಗಿ ಮುಪ್ಪಿರುವದಿಲ್ಲ. 'ನಾನು ದೇಹವು'
ಎಂದುಕೊಂಡರೆ ಮಾತ್ರ ಮುಪ್ಪು ನಮಗೆ ಅಂಟಿಕೊಳ್ಳುತ್ತದೆ. ಇದರಂತೆಯೇ
ಉಳಿದ ಸಂಸಾರಧರ್ಮಗಳನ್ನೂ ತಿಳಿಯಬಹುದಾಗಿದೆ. ಸಾವು ಎಂಬುದು ಒಂದು
ಸಂಸಾರಧರ್ಮವು. ಸಾವು ಆತ್ಮನಿಗೆ ಸಂಭವಿಸುವದೇ ಇಲ್ಲ. ತಾನು ಸತ್ತದ್ದನ್ನು
ತಾನೇ ನೋಡಲಾಗುವದಿಲ್ಲ. ಏಕೆಂದರೆ ನೋಡುತ್ತಿರುವವನು ಸಾವಿಗೆ ವಶ
ನಾಗಿರುವದಿಲ್ಲ. ಅದಕ್ಕೆ ಬದಲಾಗಿ ಸಾವಿಗೆ ಸಾಕ್ಷಿಯಾಗಿರುತ್ತಾನೆ. ಹೀಗಿರುವಲ್ಲಿ
ತಾನು ಎಂಬ ಸ್ವರೂಪಕ್ಕೆ ಸಾವಾದರೂ ಹೇಗೆ ಸಂಭವಿಸೀತು ? ಆದರೂ ದೇಹ
ಧರ್ಮಾಧ್ಯಾರೋಪದಿಂದ ತಾನು ಸಾಯುತ್ತೇನೆ- ಎಂದು ಅಜ್ಞಾನಿಯು ಭಾವಿಸು
ತ್ತಾನೆ. ಶ್ರುತಿಯು ಈ ತಪ್ಪುತಿಳಿವಳಿಕೆಯನ್ನು ಕಿತ್ತೊಗೆದು ಆತ್ಮನು ವಿಮೃತ್ಯುವು
ಎಂದು ತಿಳಿಸುತ್ತಿದೆ. ಹಾಗೆಯೇ ಮುಂದುವರೆದು ಆತ್ಮನು ಶೋಕವಿಲ್ಲದವನು-
ಎಂದು ತಿಳಿಸುತ್ತಿದೆ. ಶೋಕವು ಮನೋಧರ್ಮವು. ಮನಸ್ಸಿಗೂ ಒಳಗಿರುವ
ಆತ್ಮನು ಮನಸ್ಸಿನ ಆಗುಹೋಗುಗಳನ್ನು ನೋಡುವ ದ್ರಷ್ಟೃವಾದ್ದರಿಂದ ಶೋಕಾ
ತೀತನಾಗಿರುವನು. ಹಾಗೆಯೇ ಆತ್ಮನು ಹಸಿವಿಲ್ಲದವನು. ಬಾಯಾರಿಕೆಯಿಲ್ಲ
ದವನು. ಇವೆರಡು ಧರ್ಮಗಳೂ ಪ್ರಾಣನ ಸಂಬಂಧವಾದವುಗಳು. ಬದುಕಿರು
ವವನು ತಾನು ಪ್ರಾಣಾತ್ಮನೆಂದು ಭಾವಿಸಿ ಹಸಿವುನೀರಡಿಕೆಗಳು ತನಗೆ ಉಂಟಾಗು
ತ್ತಿವೆ- ಎನ್ನುತ್ತಾನೆ. ಆದರೆ ಇವು ಆತ್ಮನ ಧರ್ಮಗಳಲ್ಲವೆಂಬುದಕ್ಕೆ ನಮ್ಮ
ಅನುಭವವೇ ಸಾಕ್ಷಿಯಾಗಿದೆ. ಹೇಗೆಂದರೆ ಎಚ್ಚರದಲ್ಲಿ ಊಟಮಾಡಿ ತೃಪ್ತನಾಗಿ
ಮಲಗಿದ್ದವನಿಗೆ ಹಸಿವಾದಂತೆ ಕನಸಾಗುತ್ತದೆ. ಪುನಃ ಎಚ್ಚತ್ತಾಗ ಹಸಿವು ಇಲ್ಲ
ವಾಗುತ್ತದೆ. ಆದ್ದರಿಂದ ನಮ್ಮೊಡನೆ ಅನುಗತನಾಗಿ ಬರದಿರುವ ಯಾವ ಧರ್ಮ
ಗಳೂ ನಮಗೆ ಸೇರಿದ್ದಲ್ಲವೆಂದೇ ತೀರ್ಮಾನಿಸಬೇಕಾಗುತ್ತದೆ. ಹೀಗೆ ಆತ್ಮನು
ಮುಪ್ಪು, ಮರಣ, ಶೋಕ, ಮೋಹ, ಹಸಿವು, ಬಾಯಾರಿಕೆಗಳೆಂಬ ದೇಹ, ಮನಃ,
ಪ್ರಾಣಧರ್ಮಗಳನ್ನು ಮೀರಿದವನಾಗಿದ್ದಾನೆಂದು ಚಿಂತಿಸುವದೇ ದಹರೋಪಾಸ
ನೆಯ ಮುಖ್ಯತತ್ತ್ವವಾಗಿರುತ್ತದೆ.

ಈಗ ಆತ್ಮನ ಧರ್ಮಗಳಾವುವೆಂಬುದನ್ನು ಉಪಾಸನಾದೃಷ್ಟಿಯಿಂದ ಹೇಳ
ಲಾಗುವದು. ನಿರ್ಧರ್ಮಕನಾದ ಆತ್ಮನನ್ನು ಉಪಾಸನೆಮಾಡಲಾಗುವದಿಲ್ಲವಾದ್ದ
ರಿಂದ ಅಧ್ಯಾರೋಪದೃಷ್ಟಿಯನ್ನವಲಂಬಿಸಿ ಈ ಧರ್ಮಗಳ ಉಪದೇಶವನ್ನು ಸಮ
ನ್ವಯಮಾಡಿಕೊಳ್ಳಬೇಕು. ಆತ್ಮನ ಲಕ್ಷಣವನ್ನು ಅರಿಯಲು ಶ್ರುತಿಯೇ ಕಲ್ಪಿ
ಸಿರುವ ಧರ್ಮಗಳಾವುವೆಂದರೆ : ಸತ್ಯಕಾಮನು, ಸತ್ಯಸಂಕಲ್ಪನು- ಎಂಬಿವುಗಳು.
ಸತ್ಯಕಾಮನೆಂದರೆ ಸುಳ್ಳಾಗದ ಕಾಮಗಳುಳ್ಳವನು. ಸಂಸಾರಿಗಳಿಗಾದರೊ, ಕಾಮ
ಗಳು ಮನಸ್ಸಿನಲ್ಲಿ ಹುಟ್ಟಿ ಹಾಗೇ ಮೈಗರೆದುಬಿಡುವವು. ಕಾರ್ಯರೂಪಕ್ಕೆ ಬರು
ವದಿಲ್ಲ. ಆತ್ಮನು ಬ್ರಹ್ಮವಾದ್ದರಿಂದ ಅವನ ಕಾಮಗಳು ಅಂಥವಲ್ಲ. ಬೆಂಕಿಯು

ಬಿಸಿಯಂತೆ ಅವನ ಸ್ವರೂಪವೇ ಆಗಿರುವವು. ಆದ್ದರಿಂದಲೇ ಅವು ಸಂಸಾರಿಗಳ ಕಾಮುಗಳಂತೆ ಅಲ್ಲ. ಸಂಸಾರಿಗಳಿಗಾದರೊ, ಕಾಮುಗಳು ಅನಾತ್ಮಭೂತವಾಗಿದ್ದು ಅವರನ್ನು ಪ್ರಚೋದಿಸಿ ಕರ್ಮಗಳಲ್ಲಿ ತೊಡಗಿಸಿ ಫಲಗಳನ್ನುಂಟುಮಾಡುವವು. ಹೀಗೆ ಸಂಸಾರಿಗಳು ಕಾಮುಗಳಿಗೆ ದಾಸರಾಗಿರುತ್ತಾರೆ. ಆತ್ಮನಲ್ಲಿರುವ ಕಾಮುಗಳು ಹೀಗೆ ಪ್ರವರ್ತಕಗಳಲ್ಲ. ಅವು ಆತ್ಮನಿಗೆ ಅಧೀನವಾಗಿದ್ದುಕೊಂಡಿರುವವು. ಆತ್ಮನು ತನ್ನ ಸತ್ಯವಾದ ಕಾಮುಗಳೆಂಬ ವಿಭೂತಿಯಿಂದ ಜಗತ್ತನ್ನೆಲ್ಲ ಅನುಗ್ರಹಿಸುತ್ತಿರುವನು. ಮತ್ತು ಸತ್ಯಸಂಕಲ್ಪನೂ ಆಗಿರುವನು. ಅವನು ಬಯಸಿದ್ದು ಕೂಡಲೆ ಸಿದ್ಧವಾಗಿಬಿಡುವದು. ಹುಸಿಯಾದ ಸಂಕಲ್ಪಗಳು ಅವನಲ್ಲಿರುವದೇ ಇಲ್ಲ. ಅವನು ಒಬ್ಬನೇ ನೂರಾಗಬಲ್ಲನು, ಸಾವಿರವಾಗಬಲ್ಲನು- ಇತ್ಯಾದಿ ರೀತಿಯಿಂದ ವಿಶ್ವವೆಲ್ಲವೂ ತಾನೇ ಆಗಿಬಿಡಬಲ್ಲನು. ಸಹಸ್ರಶೀರ್ಷನೂ ಸಹಸ್ರಾಕ್ಷನೂ ಸಹಸ್ರಪಾದನೂ ಆಗಬಲ್ಲನು. ಇದು ಅವನ ಸತ್ಯಸಂಕಲ್ಪದ ಮಹಿಮೆಯು. ಇಂಥ ಅಮೃತಾತ್ಮನೇ ಹೃದಯಾಕಾಶದ ದಹರಗುಹೆಯಲ್ಲಿರುವನು. ಇವನ ಜ್ಞಾನಶಕ್ತಿಬಲೈಶ್ವರ್ಯವೀರ್ಯತೇಜಸ್ಸುಗಳನ್ನು ಒಂದೊಂದಾಗಿ ಶಾಸ್ತ್ರೋಪದೇಶಕ್ಕೆ ಅನುಗುಣವಾಗಿ ಅನುಸಂಧಾನಮಾಡಿಕೊಂಡು ಚಿಂತಿಸಿದಲ್ಲಿ ದಹರೋಪಾಸನೆಯ ಫಲವು ದಕ್ಕುವದು -ಎಂದು ಶ್ರುತಿಯು ಸ್ಪಷ್ಟಪಡಿಸುತ್ತಿದೆ.

ಇಂಥ ಬ್ರಹ್ಮಾತ್ಮನ ವಿಜ್ಞಾನವು ಸಂಸಾರಿಗಳಿಗೆ ಇರುವದಿಲ್ಲ. ಇಲ್ಲವಾದರೇನು ದೋಷವು ? ನಷ್ಟವೇನು ? ಎಂದರೆ ಶ್ರುತಿಯು ಹೀಗೆ ತಿಳಿಸುತ್ತಿದೆ. ಲೋಕದಲ್ಲಿ ಜನರು ಒಂದು ಕಟ್ಟುಪಾಡಿಗೆ ಒಳಪಟ್ಟು ತಮ್ಮ ನಾಗರಿಕಜೀವನವನ್ನು ನಡೆಸುವರು. ಆದರೆ ಅವರಿಗೆ ಅದೇ ಸ್ವಭಾವವೆನಿಸಿರುವದು. ಹೇಗೆಂದರೆ ಒಬ್ಬ ತಹಸೀಲ್ದಾರನು ಒಂದು ತಾಲ್ಲೂಕಿಗೆ ಯಜಮಾನನಾಗಿರುವನು. ಆ ತಾಲ್ಲೂಕಿನ ಪ್ರಜೆಗಳೆಲ್ಲರೂ ಅವನ ಶಾಸನವನ್ನು ಮಾನ್ಯಮಾಡುವರು. ಇದು ಸರಿ. ಆದರೆ ಅದೇ ಪುರುಷನ ಅಪ್ಪಣೆಯನ್ನು ಪಕ್ಕದ ತಾಲ್ಲೂಕಿನವನು ಮಾನ್ಯಮಾಡಲಾರನು. ಏಕೆಂದರೆ ಅವನ ಯಜಮಾನಿಕೆಯು ಅವನನ್ನು ಗೊತ್ತುಮಾಡಿರುವ ಸರ್ಕಾರದ ಅಧೀನವಾಗಿದ್ದು ಇಂತಿಷ್ಟು ಭಾಗಕ್ಕೆ ಮಾತ್ರವೇ ನೀನು ಅಧಿಕಾರಿಯು- ಎಂದು ಸಂಕೋಚಮಾಡಲ್ಪಟ್ಟಿರುವದು. ಹಾಗೆಯೇ ಸರ್ವಾತ್ಮನಾದ ಪರಮಪುರುಷನನ್ನು ಅರಿಯದ ಪ್ರಜೆಗಳ ಅಧಿಕಾರವೂ ಸೀಮಿತವಾಗಿದ್ದು ಅಸ್ವತಂತ್ರವಾಗಿರುವದು. ಒಂದುವೇಳೆ ಯಾವನಾದರೊಬ್ಬ ಸಾರ್ವಭೌಮನು ಇಡಿಯ ಭೂಮಂಡಲವನ್ನೇ ಆಳಿಯಾನು. ಆದರೇನು ? ಅಗ್ನಿ, ವಾಯು, ಪರ್ಜನ್ಯ, ಆದಿತ್ಯಾದಿದೇವತೆಗಳಿಗೇನೂ ಅವನು ಒಡೆಯನಾಗಲಾರನು. ಆದ್ದರಿಂದ ಹೃದಯಾಂತರ್ಗತನಾದರೂ ಸರ್ವಗತನೂ ಸತ್ಯಕಾಮುಸತ್ಯಸಂಕಲ್ಪನೂ ಸರ್ವಸ್ವತಂತ್ರನೂ ಆದ ಆತ್ಮನನ್ನು ನಿಮ್ಮಲ್ಲಿಯೇ ಹುಡುಕಿ ಕಂಡುಕೊಂಡು ಸ್ವಾರಾಜ್ಯಪದವಿಯನ್ನು ಸಂಪಾದಿಸಿಕೊಳ್ಳಿರಿ; ಸಂಸಾರದಿಂದ ಪಾರಾಗಿರಿ-ಎಂದು ಶ್ರುತ್ಯಾಚಾರ್ಯರುಗಳು ಉಪದೇಶಿಸುತ್ತಿದ್ದಾರೆ. ಆ ಕಡೆಗೆ ನಾವು ಕಿವಿಗೊಡೋಣ.

———

# ಸಾಮಾನ್ಯನೀತಿ

**ಸ್ವಫಲನಿಚಯಃ ಶಾಖಾಭಂಗಂ ಕರೋತಿ ವನಸ್ಪತೇಃ**
**ಗಮನಮಲಸಂ ಬರ್ಹಾಟೋಪಃ ಕರೋತಿ ಶಿಖಂಡಿನಃ ।**
**ಚತುರಗಮನೋ ಜಾತ್ಯೋ ಯೋಽಶ್ವಃ ಸ ಗೌರಿವ ವಾಹ್ಯತೇ**
**ಗುಣವತಿ ಜನೇ ಪ್ರಾಯೋಽಣ್ಯೈತೇ ಗುಣಾಃ ಖಲು ದೂಷಣಮ್ ।೧॥**

೧. ಹಣ್ಣುಗಳಿಂದ ತುಂಬಿದ ಗಿಡವು ತನ್ನ ರೆಂಬೆಗಳನ್ನು ಮುರಿಸಿಕೊಳ್ಳುತ್ತದೆ. ಗರಿಗಳ ಪ್ರಸಾರವು ನವಿಲಿಗೆ ನಡಗೆಯನ್ನು ವಿಳಂಬಮಾಡುತ್ತದೆ. ಚುರುಕಾಗಿ ಓಡುವ ಸ್ವಭಾವದ ಕುದುರೆಯೂ ಎತ್ತಿನಂತೆ ಭಾರವನ್ನು ಹೊರಬೇಕಾಗುತ್ತದೆ. ಹೀಗೆ ಕೆಲವು ಸಂದರ್ಭಗಳಲ್ಲಿ ಸದ್ಗುಣಗಳೇ ಸಂಕಟಕಾರಕಗಳಾಗುವದೂ ಉಂಟು.

**ವಿದ್ಯಾತೀರ್ಥೇ ಜಗತಿ ವಿಬುಧಾಃ ಸಾಧವಃ ಸತ್ಯತೀರ್ಥೇ**
**ಗಂಗಾತೀರ್ಥೇ ಮಲಿನಮನಸೋ ಯೋಗಿನೋ ಧ್ಯಾನತೀರ್ಥೇ ।**
**ಧಾರಾತೀರ್ಥೇ ಧರಣಿಪತಯೋ ದಾನತೀರ್ಥೇ ಧನಾಢ್ಯಾಃ**
**ಲಜ್ಜಾತೀರ್ಥೇ ಕುಲಯುವತಯಃ ಪಾತಕಂ ಕ್ಷಾಲಯಂತಿ ॥೨॥**

೨. ವಿದ್ವಾಂಸರು ವಿದ್ಯೆಯೆಂಬ ತೀರ್ಥದಲ್ಲಿ, ಸಾಧುಗಳು ಸತ್ಯವೆಂಬ ತೀರ್ಥದಲ್ಲಿ, ಕೊಳಕುಮನಸ್ಸಿನವರು ಗಂಗಾತೀರ್ಥದಲ್ಲಿ, ಯೋಗಿಗಳು ಧ್ಯಾನವೆಂಬ ತೀರ್ಥದಲ್ಲಿ, ರಾಜರುಗಳು (ರಕ್ತ)ಧಾರೆಯೆಂಬ ತೀರ್ಥದಲ್ಲಿ, ಧನಿಕರು ದಾನವೆಂಬ ತೀರ್ಥದಲ್ಲಿ, ಕುಲಗೃಹಿಣಿಯರು ನಾಚಿಕೆಯೆಂಬ ತೀರ್ಥದಲ್ಲಿ (ಕ್ರಮವಾಗಿ) ತಮ್ಮ ಪಾಪಗಳನ್ನು ತೊಳೆದುಕೊಳ್ಳುವರು.

**ಶೀತೇಽತೀತೇ ವಸನಮಶನಂ ವಾಸರಾಂತೇ ನಿಶಾಂತೇ**
**ಕ್ರೀಡಾರಂಭಂ ಕುವಲಯದೃಶಾಂ ಯೌವನಾಂತೇ ವಿವಾಹಮ್ ।**
**ಸೇತೋರ್ಬಂಧಂ ಪಯಸಿ ಚಲಿತೇ ವಾರ್ಧಕೇ ತೀರ್ಥಯಾತ್ರಾಂ**
**ವಿತ್ತೇಽತೀತೇ ವಿತರಣಮತಿಂ ಕರ್ತುಮಿಚ್ಛಂತಿ ಮೂಢಾಃ ॥**

೩. ಮೂಢರಾದವರು ಚಳಿಯು ಕಳೆದನಂತರ ಬಟ್ಟೆಗಳ ಸಂಗ್ರಹವನ್ನೂ ಅಪರಾಹ್ನವು ದಾಟಿದನಂತರ ಊಟವನ್ನೂ ರಾತ್ರಿಯ ಕೊನೆಯಲ್ಲಿ (ರತಿ) ಕ್ರೀಡೆಯ ಆರಂಭವನ್ನೂ ಯೌವನವು ದಾಟಿದನಂತರ ಸ್ತ್ರೀಯೊಡನೆ ವಿವಾಹವನ್ನೂ ನೀರೆಲ್ಲ ಹರಿದುಹೋದನಂತರ ಒಡ್ಡುಹಾಕುವದನ್ನೂ ಮುದುಕರಾದಮೇಲೆಯೇ ತೀರ್ಥಯಾತ್ರೆಯನ್ನೂ ಹಣವೆಲ್ಲವೂ ಕೈಬಿಟ್ಟನಂತರ ದಾನಮಾಡುವ ಔದಾರ್ಯವನ್ನೂ ಪ್ರಕಟಿಸುತ್ತಾ (ತಮ್ಮ ದಡ್ಡತನವನ್ನು ಲೋಕಕ್ಕೆ ತೋರಿಸಿಕೊಳ್ಳುತ್ತಾರೆ. ಇವು ಅನುಷ್ಠೇಯವಲ್ಲ- ಎಂದು ಅಭಿಪ್ರಾಯ.)

——— ———

# ಸತ್ಯಕಾಮನ ಪತ್ರಗಳು

## ಸೇವಾಸಂಸ್ಥೆಗಳು

"ನಮ್ಮ ಊರು ನಗರವಲ್ಲ; ಹಳ್ಳಿಯೂ ಅಲ್ಲ. ಇಲ್ಲಿ ರೋಟರಿ, ರೋಟರಾಕ್ಟ್, ಇನ್ನರ್‌ವೀಲ್, ಜೇಸಿ– ಇತ್ಯಾದಿ ಕೆಲವು ಸೇವಾಸಂಸ್ಥೆಗಳಿವೆ. ಈಚೆಗೆ ನಡೆದ ಒಂದು ಸಮಾರಂಭದಲ್ಲಿ ಭಾಷಣಕಾರರು ಈ ಸಂಸ್ಥೆಗಳ ಕೆಲವು ಲೋಪದೋಷಗಳನ್ನು ಪ್ರಸ್ತಾಪಿಸಿದರು. ಕೆಲವರು ಇವೆಲ್ಲ ಶ್ರೀಮಂತರ ಸಂಸ್ಥೆಗಳೆಂದು ಆಕ್ಷೇಪಿಸಿದರು. ಮತ್ತು ಬಡದೇಶವಾದ ಭಾರತದಲ್ಲಿ ಸೇವಾಸಂಸ್ಥೆಗಳ ಕಾರ್ಯಗಳು ಬಡಜನರಿಗೆ ಮುಟ್ಟುವಂತಿರಬೇಕೆಂದೂ ಹಿತೋಪದೇಶವನ್ನು ಮಾಡಿದರು. ನನಗೆ ಅದು ಸರಿಯೆನಿಸಿತು. ಆದರೆ ಆಯಾ ಪದಾಧಿಕಾರಿಗಳು ತಮ್ಮ ಭಾಷಣಗಳಲ್ಲಿ ಅವರವರ ಸೇವಾಕಾರ್ಯಗಳನ್ನೇ ಸಮರ್ಥಿಸಿಕೊಂಡರು. ನಾನು ಕೇವಲ ಪ್ರೇಕ್ಷಕನಾಗಿದ್ದೆನು. ನಿಜವೇನೆಂಬುದೇ ನನಗೆ ಹೊಳೆಯಲಿಲ್ಲ. ನೀವಾದರೂ ತಿಳಿಸುವಿರಾ ?" ಎಂದು ಕೇಳಿ ನೀವು ಬರೆದಿರುವ ಪತ್ರವು ಬಂದಿದೆ.

ನಿಮ್ಮ ಪತ್ರವನ್ನು ನೋಡಿದಾಗ ನನಗೆ ಹರಿಕಥೆಯವರು ಹೇಳುತ್ತಿದ್ದ ಒಂದು ಉಪಕಥೆಯು ನೆನಪಾಯಿತು. ರಾಜಸೂಯಯಾಗದ ಅನಂತರ ಅಗ್ರಪೂಜೆಗೆ ಯೋಗ್ಯರನ್ನು ಗೊತ್ತುಮಾಡಲು ಧರ್ಮರಾಜ, ದುರ್ಯೋಧನರಿಬ್ಬರೂ ಹೊರಟರಂತೆ. ಸ್ವಲ್ಪ ಸಮಯದ ಅನಂತರ ಯಾರೂ ಸಿಗಲಿಲ್ಲವೆಂದು ಇಬ್ಬರೂ ವಾಪಸು ಬಂದರಂತೆ. ಏಕೆಂದು ವ್ಯಾಸರು ಕೇಳಿದಾಗ ಧರ್ಮರಾಯನು "ಪೂಜ್ಯರೆ, ಏನು ಹೇಳಲಿ? ಸಭೆಯಲ್ಲಿ ನೆರೆದಿರುವ ಪ್ರತಿಯೊಬ್ಬರೂ ವಿದ್ಯೆ, ವಿನಯ, ತಪಸ್ಸು, ಶೌರ್ಯ, ಧೈರ್ಯ, ಔದಾರ್ಯಾದಿಗುಣಗಳಲ್ಲಿ ವಿಶಿಷ್ಟರಾಗಿರುತ್ತಾರೆ; ಹೀಗಿರುವಲ್ಲಿ ಯಾರನ್ನು ಹೆಚ್ಚಿನವರೆಂದು ಚುನಾಯಿಸಲಿ?" ಎಂದನಂತೆ. ದುರ್ಯೋಧನನಾದರೊ, 'ಗುರುಗಳೆ, ಸಭೆಯಲ್ಲಿರುವವರಲ್ಲಿ ಪ್ರತಿಯೊಬ್ಬರಲ್ಲಿಯೂ ಒಂದೊಂದು ಕಳಂಕವಿದೆ. ನಿರ್ದುಷ್ಟನಾದವನು ಯಾವನೂ ಸಿಗಲಿಲ್ಲ' ಎಂದನಂತೆ. ಹಾಗೆಯೇ ಇಲ್ಲಿಯೂ ತಿಳಿಯಬೇಕು. ನಾವು ಧರ್ಮರಾಯನ ದೃಷ್ಟಿಯವರಾದರೆ ಎಲ್ಲಾ ಸೇವಾಸಂಸ್ಥೆಗಳಲ್ಲಿಯೂ ಗುಣಗಳೇ ಕಂಡುಬರುತ್ತವೆ. ದುರ್ಯೋಧನದೃಷ್ಟಿಯವರಾದರೆ ದೋಷಗಳೇ ಕಂಡುಬರುತ್ತವೆ. ಹೀಗೇಕೆ ? ಎಂಬ ಮೂಲಭೂತಪ್ರಶ್ನೆಗೆ ಉತ್ತರವಿದು : ಪ್ರಪಂಚದಲ್ಲಿ ನಿರ್ದುಷ್ಟವಾದದ್ದಾಗಲಿ, ನಿರ್ಗುಣವಾದದ್ದಾಗಲಿ ಇಲ್ಲವೇ ಇಲ್ಲ. ಆದರ್ಶಪುರುಷನಾದ ಶ್ರೀರಾಮನಲ್ಲಿಯೂ ವಾಲಿಯು ದೋಷಾರೋಪವನ್ನು ಮಾಡಿದನು. ಪರಮನೀಚನೆಂದು ನಾವು ಭಾವಿಸಿರುವ ರಾವಣನಲ್ಲಿಯೂ ಹನುಮಂತನು 'ಅಹೋ ರೂಪಮಹೋ ಧೈರ್ಯಂ' ಎಂದು ಗುಣಗಳನ್ನು ಕಂಡನು. ಹೀಗೆ ಇದು ಜಗತ್ತನ್ನು ನೋಡುವವನ ದೃಷ್ಟಿಯನ್ನು ಅವಲಂಬಿಸಿರುತ್ತದೆ. ಇದು ಗುಣ, ಇದು ದೋಷ– ಎಂದು ನಮ್ಮ ಮನಸ್ಸು ವಿಕಲ್ಪಿಸ

ವದೇ ಮೂಲಭೂತವಾದ ದೋಷವೆಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ಗುಣದೋಷಗಳನ್ನು ಹುಡುಕುವದು ನಮ್ಮ ದೋಷವೆಂದೇ ಆಯಿತಲ್ಲವೆ?

ಈಗ ವ್ಯಾವಹಾರಿಕವಾಗಿ ಸೇವಾಸಂಸ್ಥೆಗಳ ಕಾರ್ಯ ಚಟುವಟಿಕೆಗಳ ವಿಚಾರಕ್ಕೆ ಚಿಂತಿಸೋಣ. ಸಂಘ-ಸಂಸ್ಥೆಗಳೆಂದಮೇಲೆ ಹಲವು ಅಂತಸ್ತಿನ, ಹಲವು ವಿಧವಾದ ಚಿಂತನೆಯ ಜನರು ಇದ್ದೇಇರುತ್ತಾರೆ. ಯಾವ ಸಂಸ್ಥೆಯೂ ಬರಿಯ ಶ್ರೀಮಂತ ರಿಂದಲೇ ಆಗಲಿ, ಬರಿಯ ಬಡವರಿಂದಲೇ ಆಗಲಿ- ನಡೆಯಲಾರದು. ಪಲ್ಲಕ್ಕಿಯಲ್ಲಿ ಕೂರುವವನು ಇರುವಾಗ ಅದನ್ನು ಹೊರುವವರೂ ಬೇಕೇಬೇಕು. ಹಾಗೆಂದ ಮಾತ್ರಕ್ಕೆ ಯಾರುಬೇಕಾದರೂ ಅದರಲ್ಲಿ ಕುಳಿತುಕೊಳ್ಳಲಾದೀತೆ? ಪ್ರಜಾಪ್ರಭುತ್ವ ದಲ್ಲಿ ಕೂಡ ರಾಷ್ಟ್ರಪತಿಸ್ಥಾನದ ಗೌರವವು ಒಬ್ಬನೇ ಪ್ರಜೆಗೆ ದೊರಕುವದೇ ಹೊರತು ಎಲ್ಲರಿಗೂ ಇಲ್ಲ. ಹಾಗೆಯೇ ದೈವಸೃಷ್ಟಿಯಲ್ಲಿ ಅನಾದಿಕಾಲದಿಂದಲೂ ಬಡವ-ಬಲ್ಲಿದರಿದ್ದೇ ಇರುತ್ತಾರೆ. ಶ್ರೀಕೃಷ್ಣಭಗವಂತನ ಕಾಲದಲ್ಲಿಯೂ ದ್ವಾರಕೆ ಯಂಥ ಅಮರಾವತೀಸದೃಶನಗರದಲ್ಲಿಯೂ ಕುಚೇಲನೆಂಬ ಬಡಬ್ರಾಹ್ಮಣನಿದ್ದನು- ಎಂದಮೇಲೆ ಈಗ ಕೇಳುವದೇನಿದೆ? ಆದ್ದರಿಂದ ಸೇವಾಸಂಸ್ಥೆಗಳ ಸದಸ್ಯರೂ ಅಭಿಮಾನಿಗಳೂ ತಮ್ಮ ವೈಯಕ್ತಿಕಸ್ಥಾನಮಾನಗಳನ್ನು ಮರೆತು ಒಂದುಗೂಡಿ ಲೋಕಕ್ಕೂ ತನಗೂ ಕಲ್ಯಾಣವುಂಟುಮಾಡುವಂಥ ಚಿಂತನೆಗಳನ್ನೂ ಕರ್ಮ ಗಳನ್ನೂ ಮಾಡಬೇಕು. ಯಾರಿಗೂ ಸ್ವಾರ್ಥವಿರಬಾರದು. ಹೀಗೆ ಕೂಡಿದಾಗ ಹಣವುಳ್ಳವನು ಹಣವನ್ನೂ ಬುದ್ಧಿಯುಳ್ಳವನು ಬುದ್ಧಿಯನ್ನೂ ದೇಹದಾರ್ಢ್ಯತೆ ಯುಳ್ಳವನು ತನ್ನ ದೈಹಿಕಶ್ರಮವನ್ನೂ ಸರ್ವಜನರ ಹಿತಕ್ಕಾಗಿ ತ್ಯಾಗಮಾಡ ಬೇಕು. ಪ್ರತಿಯೊಬ್ಬರಿಗೂ ದೇವರು ಒಂದಲ್ಲ, ಒಂದು ಸಂಪತ್ತನ್ನು ಕರುಣಿಸಿಯೇ ಇರುತ್ತಾನೆ. ಮಾನವನಿಗೆ ಬೇರೊಬ್ಬರ ಸಂಪತ್ತಿನಮೇಲೆ ಕಣ್ಣಿರುತ್ತದೆಯೇ ಹೊರತು ತನಗೆ ದೇವರು ಕರುಣಿಸಿರುವ ಸಂಪತ್ತು ಯಾವದು? ಅದರ ಸದುಪ ಯೋಗವು ಹೇಗಾದೀತು? ಎಂಬ ಚಿಂತನೆಯೇ ಬರುವದಿಲ್ಲ. ಇದು ದುರದೃಷ್ಟ ಕರವೇ ಸರಿ.

ಇನ್ನು ಬಡವರ ಉದ್ಧಾರದ ಮಾತು. ಐಶ್ವರ್ಯವಂತರು ತಮ್ಮ ಹೃದಯ ದಲ್ಲಿ ಮಾತ್ರ ಬೇರೊಬ್ಬನ ಬಡತನದ ಬಗ್ಗೆ ಭಾವನೆಯನ್ನು ತಂದುಕೊಂಡು ಕಾರ್ಯಾಚರಣೆಯಲ್ಲಿ ಅವನನ್ನು ತನಗೆ ಸಮಾನನಂತೆಯೇ ಕಾಣಬೇಕು. ಬಡವನೂ ತನ್ನ ಅಲ್ಪಭಾವನೆಯನ್ನು ಬದಿಗಿರಿಸಿ ಹೃದಯದಲ್ಲಿ ಉದಾತ್ತಭಾವನೆ ಯನ್ನು ಬೆಳೆಸಿಕೊಂಡು ಶ್ರೀಮಂತನಿಗೆ ಸಮಾನನಾಗಬೇಕು. ಈಶ್ವರನು ದಿಗಂಬರನು; ವಿಷ್ಣುವು ಪೀತಾಂಬರಧಾರಿ. ಆದರೇನು? ಇಬ್ಬರೂ ದೇವರೆಂದೇ ಪೂಜಿಸಲ್ಪಡುತ್ತಾರಲ್ಲವೆ? ಹೀಗೆ ಶ್ರೀಮಂತರೂ ಬಡವರೂ ಕೂಡಿಯೇ ಸಂಸ್ಥೆ ಗಳನ್ನು ನಿರ್ಮಿಸಿ ದೇಶಸೇವೆಮಾಡಬೇಕು- ಎಂದು ನನ್ನ ಅಭಿಪ್ರಾಯ.

---

# ಆರಿಸಿದ ಅರಳುಮೊಗ್ಗುಗಳು

(ಬದುಕಲು ಕಲಿಯಿರಿ- ಎಂಬ ಗ್ರಂಥದಿಂದ)

೧. ಪ್ರೀತಿಯನ್ನು ಸರಿಯಾದ ರೀತಿಯಲ್ಲಿ ಪಡೆದು ಪುಷ್ಟನಾದವನೇ ಇತರರಿಗೂ ಪ್ರೀತಿಯನ್ನು ಹಂಚಬಲ್ಲ. ಶಿಶುವಾಗಿರುವಾಗ ನಾವೇ ಮಾತನಾಡಲಾರೆವು. 'ಮಗು ಮಾತನಾಡುವದಿಲ್ಲ, ನಾನೇಕೆ ಮಾತನಾಡಬೇಕು ?' ಎಂದು ತಾಯಿಯು ಹೇಳುವದಿಲ್ಲ. ಮುದ್ದಿನಿಂದ ಎಷ್ಟೊಂದು ಮಾತನಾಡಿಸುತ್ತಾಳೆ, ಹಾಗೆ ಮಾತನಾಡಿಸಿದ್ದರಿಂದಲೇ ಮಗು ಮಾತನಾಡಲು ಕಲಿಯುತ್ತದೆ. ಮತ್ತೆ ಮಾತನಾಡಲೂ ಸಮರ್ಥವಾಗುತ್ತದೆ. ಪ್ರೀತಿಪಾತ್ರನಿಗಾಗಿ ಮಾಡುವ ತ್ಯಾಗ, ಸೇವೆ- ಇತರರಿಗೆ ಅತಿಯಾಗಿ ಕಾಣಿಸಬಹುದು. ಮಗು ರೋಗಪೀಡಿತನಾಗಿ ಅತ್ತು ಕರೆಯುವಾಗ ತಾಯಿ ಹಾಯಾಗಿ ನಿದ್ರಿಸಬಲ್ಲಳೆ? ನಿದ್ರೆಯನ್ನು ತೊರೆದು ಹಲವು ತೊಂದರೆಗಳನ್ನು ಎದುರಿಸಿ ಆಕೆ ಮಗುವಿನ ಆರೈಕೆಮಾಡಲು ಸರ್ವಪ್ರಯತ್ನಮಾಡುವಳು. ಪ್ರೀತಿಯ ಇಂಥ ಅಭಿವ್ಯಕ್ತಿಯಿಂದಲೇ ಮನುಷ್ಯನು ತನ್ನ ಶೈಶವದ ಅಸಹಾಯ ಸ್ಥಿತಿಯಿಂದ ಪಾರಾಗುತ್ತಾನೆ.

೨. ಆಧ್ಯಾತ್ಮಿಕಹಿನ್ನೆಲೆಯುಳ್ಳ ಮಾತೃತ್ವದ ಮಹಾ ಆದರ್ಶವನ್ನು ಮೈಗೂಡಿಸಿಕೊಂಡ ತಾಯಿಯಲ್ಲಿ ನಿಃಸ್ವಾರ್ಥದೈವೀಪ್ರೇಮವನ್ನು ಕಾಣಬಹುದು. ಸ್ನೇಹಿತರಾಗಲಿ ಸಂಗಾತಿಗಳಾಗಲಿ, ಮಕ್ಕಳಾಗಲಿ, ಮಾರುಕಟ್ಟೆಯಲ್ಲಿ ನಾವು ಕೊಂಡಿರುವ ವಸ್ತುಗಳೆಂಬಂತೆ- ನಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವ ಮನೋಭಾವ ಮತ್ತು ಅಸೂಯಾಪರವಾದ ಮನೋವೃತ್ತಿಗೆ- ತನ್ನ 'ಅಹಂ' ಅನಿಸಿಕೆಗೆ ಅನುಗುಣವಾಗಿಯೇ ನಡೆದುಕೊಳ್ಳಬೇಕೆಂಬ ಹಂಬಲ- ಇವು ಇರುವಲ್ಲಿ ಪರಿಶುದ್ಧ ಪ್ರೀತಿ ಬಾಳಲಾರದು.

೩. ಪ್ರೀತಿ- ಎಲ್ಲ ವ್ಯಕ್ತಿಗಳ ಮತ್ತು ಎಲ್ಲ ಜೀವಿಗಳ ದುರ್ಬಲತೆಗಳನ್ನು ನಿವಾರಣೆಮಾಡುವದಲ್ಲದೆ ಮನಸ್ಸಿಗೆ ನವಚೇತನವನ್ನು ನೀಡುತ್ತದೆ. ಮಾನಸಿಕ, ನೈತಿಕ, ಹಾಗೂ ಸಾಮಾಜಿಕ ಅಭ್ಯುದಯ, ಅಭಿವೃದ್ಧಿ ಅಥವಾ ಪ್ರಗತಿ, ಒಟ್ಟಿನಲ್ಲಿ ಬದುಕಿನ ಸರ್ವತೋಮುಖವಾದ ಏಳಿಗೆಗೆ ಈ ಪ್ರೀತಿ ಅತ್ಯಂತ ಮುಖ್ಯವಾದುದೆಂಬುದು ಒಂದು ಸಂಶಯರಹಿತ ಸತ್ಯಸಂಗತಿ. ಪ್ರೀತಿಸುವದು, ಪ್ರೀತಿಸಲ್ಪಡುವದು -ಒಂದು ಅತ್ಯಂತ ಮುಖ್ಯ ಜೀವಸತ್ವ ಅಥವಾ ಆಹಾರಸತ್ವವಾಗಿ ಪರಿಣಮಿಸುತ್ತದೆ. ಸಂತಸದ ಬಾಳ್ವೆಗೆ, ಸರ್ವತೋಮುಖವಾದ ಬೆಳವಣಿಗೆಗೆ ಪ್ರೀತಿಯು ಈ ವಿಟಮಿನ್ ಅನಿವಾರ್ಯವಾದ ಅಂಶವಾಗಿದೆ.

೪. ತಾಯಿಯು ದೇವರಂತೆ, ದೇವರಾದರೂ, ಎಂದೆಂದೂ ಕುಂದದ ಪ್ರೇಮದಿಂದ ನಮಗೆ ತಾಯಿಯಂತೆ-ಎಂಬ ಭಾವನೆಯು ಬೆಳೆಯಬೇಕು. ನಮ್ಮ ದೇಶದಲ್ಲಿ ಪುಟ್ಟ ಹೆಣ್ಣುಮಕ್ಕಳನ್ನು 'ಏನಮ್ಮಾ, ಮಗು' ಎನ್ನುವೆವು. ಇದು ಮಾತೃತ್ವದ ಮಹಿಮೆಯನ್ನು ಸೂಚಿಸುವ ಮಾತು. ವಿದೇಶಗಳಲ್ಲಿ ಯುವತಿಯರನ್ನು 'ಅಮ್ಮಾ' ಎಂದರೆ 'ನಾನೇನು ಮುದುಕಿಯಾಗಿಬಿಟ್ಟೆನೆ?' ಎಂದು ಅವರು ಕುಪಿತರಾಗುವರು. ಇದೇ ವ್ಯತ್ಯಾಸವು.

# ವಾಯುದೇವರು

(ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಪ್ರಪಂಚವೆಲ್ಲ ನಿರಂತರ ಕ್ರಿಯಾಮಯವಾಗಿರುತ್ತದೆ. ಭೂಮಿಯು ತನ್ನ ರಚನೆಯಲ್ಲಿ ಮಾರ್ಪಡುತ್ತಲೇ ಇರುವದು. ಭೂಮಿಯಮೇಲಿರುವ ಕಾಡುಗಳು, ಬೆಟ್ಟಗಳು, ನದಿಗಳು, ಸಮುದ್ರಗಳು, ಮರಗಿಡಬಳ್ಳಿಗಳು, ಹುಳುಹುಪ್ಪಟೆಗಳು, ದನಕರುಗಳು, ಹಕ್ಕಿಗಳು– ಎಲ್ಲವೂ ಎಡೆಬಿಡದೆ ಮಾರ್ಪಡುತ್ತಿರುತ್ತವೆ. ಚಲಿಸುತ್ತಿರುತ್ತವೆ. ಸದ್ದುಮಾಡುತ್ತಿರುತ್ತವೆ. ಇದೆಲ್ಲ **ಆಧಿಭೌತಿಕಶಕ್ತಿಯ** ವಿಭೂತಿಗಳು. ಅಂತರಿಕ್ಷದಲ್ಲಿ ಹಾರಾಡುತ್ತಿರುವ ಪಕ್ಷಿಗಳೇ ಅಲ್ಲದೆ ಒಂದೇ ಸಮನೆ ಗಾಳಿ ಮನಬಂದಂತೆ ಬೀಸುತ್ತಿರುತ್ತದೆ. ಅದರ ಅಂತರಾಳದಲ್ಲಿ ನಮಗೆ ಇನ್ನೂ ಗೋಚರವಾಗದ ವಿಶೇಷಗಳು ಅಡಗಿರುತ್ತವೆ. ಅವೆಲ್ಲವೂ ಕ್ರಿಯಾತ್ಮಕವಾಗಿಯೇ ಇರುತ್ತವೆ.

ಆಕಾಶವೆಂದು ಸಾಮಾನ್ಯಜನರು ಕರೆಯುತ್ತಿರುವ ಮೇಲುಗಡೆಯಲ್ಲಿ ಸೂರ್ಯ, ಚಂದ್ರ, ಮಂಗಳಾದಿಗ್ರಹಗಳಿವೆ. ಅವೆಲ್ಲವೂ ನಿಯತವಾದ ಒಂದೊಂದು ದಾರಿಯನ್ನು ಗೊತ್ತುಮಾಡಿಕೊಂಡು ಸಂಚರಿಸುತ್ತಿರುವವು. ಅವುಗಳ ಬೆಳಕು ಭೂಮಿಯ ಮೇಲೆ ಬಿದ್ದಂತೆಲ್ಲ ಬಗೆಬಗೆಯ ಪರಿಣಾಮಗಳು ಆಗುತ್ತಿರುವವು. ಗ್ರಹಗಳ ಸಂಚಾರವೆಂಬುದೂ ಕ್ರಿಯಾತ್ಮಕವೇ ಆಗಿದೆ. ಇದು **ಆಧಿದೈವಿಕಶಕ್ತಿ**ರೂಪಗಳು.

ಇನ್ನು ಅಧ್ಯಾತ್ಮವಾಗಿ– ಎಂದರೆ ನಮ್ಮೊಳಗೇ ನಡೆಯುತ್ತಿರುವವಾಗಿ ಅನುಭವಕ್ಕೆ ಬರುವ ಕ್ರಿಯಾಶಕ್ತಿರೂಪಗಳನ್ನು ಮನದಂದರೆ ಅತ್ಯಂತ ಆಶ್ಚರ್ಯವಾಗುವದು. ಕಣ್ಣು, ಕಿವಿ, ಮೂಗು– ಮುಂತಾದ ಸ್ಥಾನಗಳನ್ನು ಆಶ್ರಯಿಸಿಕೊಂಡು ಕೆಲಸಮಾಡುತ್ತಿರುವ ಜ್ಞಾನೇಂದ್ರಿಯಗಳ ವ್ಯಾಪಾರಗಳು ಎಷ್ಟು ವಿಚಿತ್ರವಾಗಿವೆ! ನಾಲಗೆ, ಕೈ, ಕಾಲು–ಮುಂತಾದವುಗಳ ಮೂಲಕ ಕೆಲಸಮಾಡುತ್ತಿರುವ ಕರ್ಮೇಂದ್ರಿಯವ್ಯಾಪಾರಗಳು ಎಷ್ಟು ಅದ್ಭುತವಾಗಿವೆ? ಇನ್ನು ಈ ಇಂದ್ರಿಯಗಳ ವ್ಯಾಪಾರಗಳನ್ನು ಹಿಡಿತದಲ್ಲಿಟ್ಟುಕೊಳ್ಳುವ ಮನಸ್ಸಿನ ವ್ಯಾಪಾರವು ಎಂಥ ವಿಲಕ್ಷಣವಾದದ್ದು?

ಈ ಮೂರುಬಗೆಯ ಚಲನವಲನಗಳಿಗೂ ಕಾರಣವಾಗಿರುವ ತತ್ತ್ವವನ್ನು **ಪ್ರಾಣ, ವಾಯು, ಸೂತ್ರ**– ಮುಂತಾದ ಹೆಸರುಗಳಿಂದ ಶಾಸ್ತ್ರದಲ್ಲಿ ಕರೆದಿರುತ್ತದೆ. ಪ್ರಪಂಚದಲ್ಲಿ ಕಾಣಿಸಿಕೊಳ್ಳುತ್ತಿರುವ ಸರ್ವವಿಧವಾದ ಕ್ರಿಯೆಗಳೂ ಈ ಪ್ರಾಣನ ಅಥವಾ ವಾಯುವಿನ ಮಹಿಮೆಯನ್ನು ಸಾರುತ್ತಿರುವವು. ಭೌತಿಕ ವಿಜ್ಞಾನಶಾಸ್ತ್ರದಲ್ಲಿ ಕಂಡುಹಿಡಿದಿರುವ ಯಂತ್ರವಿಶೇಷಗಳೆಲ್ಲ ಈ ವಾಯುವಿನ ನಿಯಮವನ್ನನುಸರಿಸಿಯೇ ಕೆಲಸಮಾಡುತ್ತಿರುವವು. ನಮಗೆ ಪ್ರತ್ಯಕ್ಷವಾಗಿ ತೋರುತ್ತಿರುವ ಈ ವಾಯುವೇ ಪರಮೇಶ್ವರನ ಕ್ರಿಯಾಶಕ್ತಿವಿಕಾಸವು. 'ಹೇ ವಾಯುದೇವ, ನಿನಗೆ ನಮಸ್ಕಾರ! ನಿನ್ನ ಅನುಗ್ರಹದಿಂದ ನಮ್ಮ ಇಂದ್ರಿಯಗಳೆಲ್ಲವೂ ಯೋಗ್ಯವಾದ ಕ್ರಿಯೆಗಳನ್ನು ಮಾಡುವ ಸಾಮರ್ಥ್ಯವುಳ್ಳವಾಗಲಿ!' ಎಂದು ಬೇಡಿಕೊಳ್ಳಿರಿ.

# ಗ್ರಂಥಪರಿಚಯ

೧. Grammar, Composition and General English: ಬರೆದವರು : ಶ್ರೀ S.L.N. ಶರ್ಮಾ ; ಪ್ರಕಾಶಕರು : ಕೆ. ಶಂಕರನಾರಾಯಣ, 29/3, R.T.O. Office Road, Hassan. ಪುಟಗಳು : ಡೆಮ್ಮಿ 132. ಬೆಲೆ ರೂ. 8-25.

ಈ ಪುಸ್ತಕವನ್ನು ಲೇಖಕರು ಇತ್ತೀಚೆಗೆ ಹಾಸನದಲ್ಲಿ ಸಂಪಾದಕರಿಗೆ ಸಮರ್ಪಿಸಿದರು. ಗ್ರಂಥವು ಮಿಡಲ್, ಹೈಸ್ಕೂಲುಗಳು ಹಾಗೂ ಪದವಿಪೂರ್ವಕಾಲೇಜಿನ ಉಪಾಧ್ಯಾಯರು ಹಾಗೂ ವಿದ್ಯಾರ್ಥಿಗಳಿಗೂ ಎಲ್.ಐ.ಸಿ. ಹಾಗೂ ಬ್ಯಾಂಕ್ ನೌಕರರಿಗೂ ಉಪಯುಕ್ತವೂ ಲಾಭದಾಯಕವೂ ಆಗಿದೆ- ಎಂದು ಮುನ್ನುಡಿಯನ್ನು ಬರೆದಿರುವ ಮೈಸೂರು ವಿಶ್ವವಿದ್ಯಾಲಯದ ಇಂಗ್ಲಿಷ್ ಪ್ರೊಫೆಸರ್ ಶ್ರೀ॥ ಎಸ್. ಅನಂತನಾರಾಯಣರವರು ತಿಳಿಸಿದ್ದಾರೆ. ಮತ್ತು ಗ್ರಂಥದಲ್ಲಿ ಅಡಗಿರುವ ವೈಶಿಷ್ಟ್ಯಗಳನ್ನೂ ಉಲ್ಲೇಖಿಸಿದ್ದಾರೆ. ಭಾಷೆಯು ವ್ಯಾಕರಣದ ಚೌಕಟ್ಟಿನಲ್ಲಿದ್ದರೆ ಸಾಣೆಹಿಡಿದ ರತ್ನದಂತೆ ಶೋಭಿಸುತ್ತದೆ- ಎಂದು ಹೇಳಬಹುದು. ಇದರ ಉಪಯೋಗವನ್ನು ಮಾಡಿಕೊಂಡು ವಿದ್ಯಾರ್ಥಿಗಳೂ ಅಧ್ಯಾಪಕರೂ ಪ್ರಕಾಶಕರನ್ನು ಪ್ರೋತ್ಸಾಹಿಸಬೇಕಾಗಿ ಕೋರಿದೆ.

೨. **ಆಶ್ವಲಾಯನಪೂರ್ವಪ್ರಯೋಗಚಂದ್ರಿಕಾ:** ಭಾಗ ೧. ಬರೆದವರು: ಋಗ್ವೇದ ಘನಪಾಠೀ ವಿದ್ವಾನ್ ಸಂ. ವೆಂಕಟೇಶಯ್ಯ, ಎಂ.ಎ.ಬಿ.ಟಿ., ಪ್ರಕಾಶಕರು : ಕೂಡ್ಲಿ ಶೃಂಗೇರಿ ಮಹಾಸಂಸ್ಥಾನ ; ಕೇಂದ್ರ : ಚಿತ್ರದುರ್ಗ. ಪುಟಗಳು: ಕ್ರೌನ್ ೭೦ ; ಬೆಲೆ ರೂ. ೫.

ಶ್ರೀ ಕೂಡ್ಲಿ ಶೃಂಗೇರಿಜಗದ್ಗುರುಮಹಾಸಂಸ್ಥಾನದ ಪೂಜ್ಯ ಶ್ರೀಶಂಕರಾಚಾರ್ಯತ್ರಯರ ಅನುಗ್ರಹಾಶೀರ್ವಾದಗಳೊಡನೆ ಶ್ರೀಮಠದವರ ಧನಸಹಾಯವನ್ನವಲಂಬಿಸಿ ಹೊರಬಂದಿರುವ ಈ ಪ್ರಯೋಗಗ್ರಂಥವು ಕನ್ನಡಲಿಪಿಯಲ್ಲಿ ಸಸ್ವರವೇದಮಂತ್ರಗಳೊಡನೆಯೂ ಉಪಯುಕ್ತ ವಿಷಯಗಳು, ಟಿಪ್ಪಣಿಗಳಿಂದಲೂ ಕೂಡಿ ಸರ್ವಾಲಂಕೃತವಾಗಿ ಪ್ರಕಟವಾಗಿದೆ. ಗ್ರಂಥಕರ್ತರು ವೈದಿಕ, ಲೌಕಿಕವಿದ್ಯಾನಿಷ್ಣಾತರೂ ಶ್ರೋತ್ರಿಯರೂ ಕರ್ಮಠರೂ ಆದ ಮಹನೀಯರು. ಇಂಥ ಮಹನೀಯರು ಈ ಪುಸ್ತಕದಲ್ಲಿ ಪುಣ್ಯಾಹ-ನಾಂದೀಪ್ರಯೋಗಗಳೊಡನೆ ಜಾತಕರ್ಮಾದಿ ಎಂಟು ಸಂಸ್ಕಾರಕ್ರಮಗಳನ್ನು ವಿವರಿಸಿರುತ್ತಾರೆ. ಪುರೋಹಿತರಿಗೂ ಕರ್ಮಕಾಂಡದಲ್ಲಿ ಶ್ರದ್ಧೆಯುಳ್ಳ ಆಸ್ತಿಕಮಹನೀಯರಿಗೂ ಇದು ಅತ್ಯುಪಯುಕ್ತವಾಗಿದೆ. ಗ್ರಂಥಕ್ಕೆ ಸುಸ್ವಾಗತ !

**ಸಾದರಸ್ವೀಕಾರ : ಶಿವಪಂಚಾಕ್ಷರೀನಕ್ಷತ್ರಮಾಲಿಕಾಸ್ತೋತ್ರಮ್:** ಅನುವಾದಕರು ಮತ್ತು ಪ್ರಕಾಶಕರು : ಶ್ರೀ॥ ಬುರುಗನಹಳ್ಳಿ ಭೀಮಸೇನಶರ್ಮಾ, ನಂ. 2, 9ನೇ ಕ್ರಾಸ್, N.R. ಕಾಲೋನಿ, ಬೆಂಗಳೂರು-19. ಪುಟಗಳು : ಕ್ರೌನ್ ೩೬ ; ಬೆಲೆ ರೂ. 2-25. ೪. **ವೇದದಲ್ಲಿ ವಿಜ್ಞಾನಭಂಡಾರ :** ಪುಟಗಳು ೪೦ ; ವೇದವಿಜ್ಞಾನಮಹಾಪೀಠ, ನಂ. 19, 39ನೇ 'ಎ' ಕ್ರಾಸ್, 11ನೇ ಮೇನ್, ಜಯನಗರ 'ಟಿ' ಬ್ಲಾಕ್, ಬೆಂಗಳೂರು-11.

---

# ಜೀವಾತ್ಮನ ಅವಸ್ಥಾಭೇದಗಳು

(ಸಂಪಾದಕ)

ಉಪನಿಷಚ್ಛಾಸ್ತ್ರವು ಜೀವಾತ್ಮನು ಪರಬ್ರಹ್ಮವೇ- ಎಂಬುದನ್ನು ಮತ್ತೆಮತ್ತೆ ಅವಧಾರಣೆಮಾಡಿ ಹೇಳುತ್ತದೆ. ಆದರೆ ಪ್ರತ್ಯಕ್ಷಾದಿಪ್ರಮಾಣಗಳನ್ನು ಬಳಸಿ ವ್ಯವಹಾರಮಾಡುತ್ತಿರುವ ನಮಗೆ ಈ ತತ್ತ್ವವು ವಿರುದ್ಧವಾಗಿಯೇ ಕಂಡುಬರುತ್ತಿದೆ. ಹೀಗೆ ಶಬ್ದಪ್ರಮಾಣಕ್ಕೂ ಪ್ರತ್ಯಕ್ಷಪ್ರಮಾಣಕ್ಕೂ ವಿರೋಧವಾದಾಗ ಶಬ್ದಪ್ರಮಾಣವನ್ನು ಮತ್ತೊಮ್ಮೆ ಪರೀಕ್ಷಿಸಬೇಕಾಗುವದು. ಆಗ ನಿಜವೇನೆಂಬುದು ತಿಳಿಯಲಿದೆ. ಮತ್ತು ಮೇಲುನೋಟಕ್ಕೆ ಪ್ರತ್ಯಕ್ಷಪ್ರಮಾಣಸಿದ್ಧವಾದ ವಿಷಯವು ಸರಿಯೆನಿಸಿದರೂ ಅಲ್ಲಿಯೂ ಅನುಭವಾಂಗವಾದ ತರ್ಕವನ್ನು ಉಪಯೋಗಿಸಿ ಪರೀಕ್ಷಿಸಿದಲ್ಲಿ ಅದರ ನಿಜವೂ ತಿಳಿಯುವದು. ಶಾರೀರಕಮೀಮಾಂಸೆಯು ಈ ಕೆಲಸವನ್ನು ಕೈಗೊಂಡಿರುತ್ತದೆ. ಸಾಮಾನ್ಯವಾಗಿ ಲೌಕಿಕರಾಗಲಿ, ದಾರ್ಶನಿಕರಾಗಲಿ ಪ್ರಮಾಣಸಿದ್ಧವಾದ ವಸ್ತುವನ್ನು ನಿಜವೆನ್ನುವರೇ ಹೊರತು ಪ್ರಮಾಣಗಳು ಸರಿಯೊ, ತಪ್ಪೊ-ಎಂಬುದನ್ನು ಶೋಧಿಸಲು ಹೋಗುವದಿಲ್ಲ. ಆದ್ದರಿಂದಲೇ ಪರಮಸತ್ಯದ ಅರಿವು ಅವರಿಗೆ ದಕ್ಕಿರುವದಿಲ್ಲ. ವೇದಾಂತಶಾಸ್ತ್ರವಾದರೊ, ಶ್ರುತ್ಯಭಿಪ್ರಾಯವನ್ನು ಕೂಡ- ಅದು ಎಲ್ಲಾ ಶ್ರುತಿವಾಕ್ಯಗಳಿಂದ ಪ್ರತಿಪಾದಿಸಲ್ಪಟ್ಟ ಸಮನ್ವಿತವಾಗಿದೆ- ಎಂದು ಕಂಡುಬಂದಮೇಲೂ ಅನುಭವದ ಒರೆಗಲ್ಲಿಗೆ ತಿಕ್ಕಿ ನೋಡಿಯೇ ತೀರ್ಮಾನವನ್ನು ಹೊರಗೆಡಹುತ್ತದೆ. ಶ್ರುತಿಯಲ್ಲಿರುವ ಈ ವಿಚಾರಕ್ರಮವನ್ನು ಪೂಜ್ಯಪಾದ ಶ್ರೀಶಂಕರಾಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯದಲ್ಲಿ ವಿವರಿಸಿರುತ್ತಾರೆ. ಜಿಜ್ಞಾಸುಗಳು ಈ ವಿಚಾರಕ್ರಮದಿಂದಲೇ ಬ್ರಹ್ಮಾತ್ಮರುಗಳ ಐಕ್ಯವನ್ನು ಕಂಡುಕೊಂಡು ಹೃದಯಗ್ರಂಥಿಯನ್ನು ಭೇದಿಸಿಕೊಳ್ಳಬೇಕಾಗಿದೆ.

ಈಗ ಪ್ರತ್ಯಕ್ಷಾದಿಪ್ರಮಾಣಗಳ ವ್ಯಾಪ್ತಿಯೇನು? ಎಂಬಿದನ್ನು ನೋಡೋಣ. ಪ್ರತ್ಯಕ್ಷವನ್ನು ಪ್ರಮಾಣರಾಜನೆನ್ನಬಹುದು. ಏಕೆಂದರೆ ಅದನ್ನನುಸರಿಸಿಯೇ ಅನುಮಾನಾದಿಪ್ರಮಾಣಗಳು ಪ್ರಮಾಣಗಳೆನಿಸಿರುವವು. ಭೌತಿಕವಿಜ್ಞಾನಶಾಸ್ತ್ರಕ್ಕೂ ಇದು ಸಮಾನವಾಗಿದೆ. ನಿರೀಕ್ಷಣ-ಪರೀಕ್ಷಣಾದಿಗಳೆಲ್ಲವೂ ಪ್ರತ್ಯಕ್ಷವನ್ನೇ ಅವಲಂಬಿಸಿರುತ್ತವೆ. ಇಷ್ಟೆಲ್ಲ ನಿಜವಾದರೂ ಪ್ರಮಾಣಗಳು ಪ್ರಮೇಯವಸ್ತುಗಳನ್ನು ತಿಳಿಸಬಲ್ಲವೇ ಹೊರತು ಪ್ರಮಾತೃವನ್ನೇನೂ ಸಿದ್ಧಮಾಡಿಕೊಡಲಾರವು. ಏಕೆಂದರೆ ಪ್ರಮಾಣಗಳು ಸಿದ್ಧವಾಗುವ ಮೊದಲೇ ಪ್ರಮಾತೃವು ಸಿದ್ಧನಾಗಿರುತ್ತಾನೆ. ಹೀಗಿರುವಲ್ಲಿ ಪ್ರಮಾತೃವನ್ನು ಸ್ವತಃಸಿದ್ಧನೆಂದೂ ಪ್ರಮಾಣಸಿದ್ಧನಲ್ಲವೆಂದೂ ವಿಚಾರವಂತರೆಲ್ಲರೂ ಒಪ್ಪಬೇಕು. ಇರಲಿ. ಪ್ರಮಾತೃವಿನ ಅನುಭವಗಳೇನು? ಅವನಿಗೆ ಒದಗುತ್ತಿರುವ ಅವಸ್ಥೆಗಳು ಯಾವವು ? ಅವುಗಳನ್ನು ನೇರಾಗಿ ಅನುಭವಿಸುವ ಪ್ರಮಾತೃವಿನ ಪರಮಾರ್ಥಸ್ವರೂಪವೇನು ? ಎಂಬೀ ವಿಚಾರಗಳು ಕೇವಲ ವೇದಾಂತಶಾಸ್ತ್ರಕ್ಕೇ ಮೀಸಲಾಗಿರುತ್ತವೆ.

ಅಧ್ಯಾತ್ಮಶಾಸ್ತ್ರದಲ್ಲಿ ಪ್ರಮಾತೃ, ಜೀವ, ಶಾರೀರ– ಈ ಎಲ್ಲಾ ಶಬ್ದಗಳಿಗೂ ಒಂದೇ ಅರ್ಥವಿದೆ. ಪ್ರಮಾಣಗಳನ್ನು ಬಳಸುವಾಗ ಪ್ರಮಾತೃವೆಂದೂ ಪ್ರಾಣಧಾರಣೆಮಾಡಿಕೊಂಡು ಪ್ರಾಣಾಭಿಮಾನಿಯಾಗಿದ್ದಾಗ ಜೀವನೆಂದೂ ಶರೀರವನ್ನು ತಾನೆಂದುಕೊಂಡಿರುವಾಗ ಶಾರೀರನೆಂದೂ ಒಬ್ಬನನ್ನೇ ಕರೆಯುವೆವು. ಇಷ್ಟೇ ಅಲ್ಲ. ಎಚ್ಚರವನ್ನು ಅನುಭವಿಸುವಾಗ ಜಾಗರಿತಾತ್ಮನೆಂದೂ ಕನಸನ್ನು ಅನುಭವಿಸುವಾಗ ಸ್ವಪ್ನಾತ್ಮನೆಂದೂ ತನಿನಿದ್ರೆಯನ್ನನುಭವಿಸುವಾಗ ಸುಷುಪ್ತಾತ್ಮನೆಂದೂ ಸಾಪೇಕ್ಷವಾಗಿ ಕರೆಯುತ್ತೇವೆ. ಇದು ವ್ಯವಹಾರದಲ್ಲಿ ಒಬ್ಬ ವ್ಯಕ್ತಿಯನ್ನೇ ತಂದೆ, ಅಜ್ಜ, ಮಾವ, ಭಾವ– ಇತ್ಯಾದಿ ಹೆಸರುಗಳಿಂದ ಕರೆದಂತೆ ಎಂದು ತಿಳಿಯಬೇಕು. ಆದ್ದರಿಂದ ಆಯಾ ದೇಶಕಾಲನಿಮಿತ್ತಗಳಿಗೂ ಅವಸ್ಥೆಗಳಿಗೂ ಸಂಬಂಧಿಸಿದಂತೆ ಬೇರೆಬೇರೆಯ ಹೆಸರಿನಿಂದ ವ್ಯವಹರಿಸಲ್ಪಡುವ ಈ ಆತ್ಮನು ಯಾರು ? ಇವನ ನಿಜವಾದ ತಿರುಳೇನು ? ಎಂದು ವಿಚಾರಿಸುವದೇ ವೇದಾಂತಶಾಸ್ತ್ರದ ಕೆಲಸವಾಗಿರುತ್ತದೆ. ಈ ಆತ್ಮಸ್ವರೂಪನಿರ್ಧಾರಣೆಗೆ ಪ್ರಮಾಣಗಳ ಸಹಾಯವೇನೂ ಬೇಕಾಗುವದಿಲ್ಲ. ಏಕೆಂದರೆ ಹಿಂದೆ ತಿಳಿಸಿದಂತೆ ಪ್ರಮಾತೃವಿನ ಸಿದ್ಧಿಗೇ ಪ್ರಮಾಣಗಳು ಬೇಡದೆ ಇರುವಾಗ ಪ್ರಮಾತೃವಿನ ಆತ್ಮನನ್ನು ಕಂಡುಕೊಳ್ಳಲು ಅವು ಹೇಗೆತಾನೆ ಬೇಕಾದಾವು ? ಅಥವಾ ಸಮರ್ಥವಾದಾವು ? ಇದನ್ನು ವಿಚಾರವಂತರು ನೆನಪಿಟ್ಟುಕೊಳ್ಳಬೇಕು. ಹೀಗೆ ಪ್ರಮಾಣಗಳ ವ್ಯಾಪಾರವನ್ನು ಕೈಬಿಟ್ಟನಂತರ ಆತ್ಮಸ್ವರೂಪನಿರ್ಧಾರಣೆಗೆ ಉಳಿಯುವದು ಅನುಭವಮಾತ್ರವೇ ಆಗಿದೆ. ಈ ಅನುಭವವು ಐಂದ್ರಿಯಿಕ, ಮಾನಸಿಕ– ಯಾವದೂ ಅಲ್ಲವಾದ್ದರಿಂದ ಶ್ರೌತಾನುಭವವೆಂದು ಉಪಚಾರಕ್ಕೆ ಕರೆಯಲಾಗಿದೆ. ಇಂಥ ಶ್ರೌತಾನುಭವದ ಆಧಾರದಿಂದ ಜೀವಾತ್ಮನ ಅವಸ್ಥಾವಿಶೇಷಗಳನ್ನು ಪರೀಕ್ಷಿಸಿ ಅವನ ಸ್ವರೂಪನಿರ್ಧಾರಣೆಯನ್ನು ಇನ್ನು ಮುಂದೆ ಮಾಡಲಾಗುವದು.

ವೇದಾಂತಾಚಾರ್ಯರಾದ ಬಾದರಾಯಣರು ತಮ್ಮ ಸೂತ್ರಗಳಲ್ಲಿ **'ಸಂಧ್ಯೇ ಸೃಷ್ಟಿರಾಹ ಹಿ'** ಎಂದು ಮುಂತಾಗಿ ಅಪ್ಪಣೆಕೊಡಿಸಿದ್ದಾರೆ. ಶ್ರೀಶಂಕರಭಗವತ್ಪಾದರು ಈ ಸೂತ್ರದಿಂದಾರಂಭಿಸಿ ಮುಂದಿನ ನಾಲ್ಕು ಅಧಿಕರಣಗಳಲ್ಲಿ ಜೀವಾತ್ಮನ ಅವಸ್ಥಾಭೇದಗಳನ್ನು ವಿಚಾರಿಸಲಾಗುವದು– ಎಂದು ತಿಳಿಸಿದ್ದಾರೆ. ಇದು ಹೇಗೆ ಅನುಭವಗಮ್ಯವಾಗಿದೆ– ಎಂದರೆ ಜೀವಾತ್ಮನು ಅನುಭವಿಸುತ್ತಿರುವ ಎಚ್ಚರ, ಕನಸು, ತನಿನಿದ್ರೆ– ಎಂಬ ಅವಸ್ಥೆಗಳು ಸಾರ್ವತ್ರಿಕವಾಗಿವೆ. ಇವುಗಳ ಅನುಭವದ ಬಗ್ಗೆ ಯಾರಿಗೂ ಯಾವ ಸಂಶಯವೂ ಉಳಿದಿರುವದಿಲ್ಲ. ಸಂಶಯಗಳೇನಿದ್ದರೂ ಇವು ಹೇಗೆ ಸಂಭವಿಸುತ್ತವೆ? ಒಂದನ್ನೊಂದು ಬಾಧಿಸುವದೇಕೆ? ಹಾಗೂ ಎಚ್ಚರವೇ ನಿಜವೆಂದೇಕೆ ತೋರುತ್ತದೆ ? ಇತ್ಯಾದಿ ರೂಪದಲ್ಲಿರುವವೇ ಹೊರತು 'ಅವಸ್ಥಾನುಭವಿಯು ನಾನಲ್ಲ'– ಎಂದು ಯಾರಿಗೂ ಅನಿಸಿರುವದಿಲ್ಲ. ಆದ್ದರಿಂದ ಅವಸ್ಥಾನುಭವಿಯಾದ ಜೀವನು ಆಯಾ ಅವಸ್ಥೆಗಳಲ್ಲಿ ಏನೇನು ಅನುಭವಗಳನ್ನು ಪಡೆಯುತ್ತಾನೆ? ಅವೆಲ್ಲವೂ ಅವನ ಸ್ವರೂಪಕ್ಕೆ ಸೇರಿದವುಗಳೆ ? ಅಥವಾ ಔಪಾಧಿಕಗಳೆ–

ಎಂಬಿದನ್ನು ಕುರಿತು ಈಗ ಚಿಂತಿಸಲಾಗುವದು. ಇದಕ್ಕೆ ಸಂಬಂಧಪಟ್ಟಂತೆಯೇ ಆಯಾ ಅವಸ್ಥೆಗಳಲ್ಲಿ ಪ್ರಮಾತೃವಾಗಿ ಜೀವನು ಬಳಸುವ ಪ್ರಮಾಣಪ್ರಮೇಯಗಳು, ಅವುಗಳ ಸತ್ಯತ್ವ, ಹಾಗೂ ಅವುಗಳೊಡನೆ ಜೀವಾತ್ಮನ ಸಂಬಂಧ–ಇವುಗಳ ತತ್ತ್ವವನ್ನೂ ವಿಚಾರಮಾಡಲಾಗುವದು. ಇದರಿಂದ ಆತ್ಮಸ್ವರೂಪನಿರ್ಧಾರಣೆಯಾಗಲಿದೆ.

ಈಗ ಅವಸ್ಥೆಗಳೆಂದರೇನು? ಅವು ಎಷ್ಟು? ಅವುಗಳ ವ್ಯಾಪ್ತಿಯೇನು? ಎಂಬಿದನ್ನು ನೋಡೋಣ. ಲೌಕಿಕರ ದೃಷ್ಟಿಯಿಂದ ಎಚ್ಚರವೊಂದೇ ಮುಖ್ಯವಾದ ಅವಸ್ಥೆಯು. ಏಕೆಂದರೆ ಎಲ್ಲಾ ವ್ಯವಹಾರವೂ ಸಾಗುವದು ಎಚ್ಚರದಲ್ಲೇ ಆಗಿದೆ. ಜೀವಾತ್ಮನ ಸುಖಭೋಗವಿಲಾಸಗಳಿಂದಾರಂಭಿಸಿ ಜನನಮರಣಪರ್ಯಂತವಾದ ಎಲ್ಲಾ ವ್ಯವಹಾರವೂ ಎಚ್ಚರದಲ್ಲಿಯೇ ಸಾಗುವದು. ಇನ್ನು ಧರ್ಮಾಧರ್ಮಗಳು, ಪಾಪಪುಣ್ಯಗಳು, ಸ್ವರ್ಗನರಕಗಳು, ವಿಧಿಪ್ರತಿಷೇಧಗಳು– ಎಲ್ಲಕ್ಕೂ ಎಚ್ಚರವೇ ಆಧಾರವು. ಎಚ್ಚರದ ದೃಷ್ಟಿಯಿಂದ ಕನಸು ಸುಳ್ಳು; ಅದು ತಾತ್ಕಾಲಿಕವಾಗಿ ಕಾಣಿಸಿಕೊಂಡು ಮರೆಯಾಗಿಬಿಡುವದು. ಇನ್ನು ಗಾಢನಿದ್ರೆಯಂತೂ ಕೇವಲ ಜೀವಾತ್ಮನ ವಿಶ್ರಾಂತಿಸ್ಥಿತಿಯೇ ಹೊರತು ಅದರಲ್ಲಿ ಪುರುಷಾರ್ಥವೇನಿಲ್ಲ. ಆದ್ದರಿಂದ ಎಚ್ಚರದ ಅನುಭವಾನುಸಾರಯಾಗಿ, ಮತ್ತು ಎಚ್ಚರದ ಪ್ರಮಾತೃವು ಪ್ರಮಾಣಗಳನ್ನು ಬಳಸಿ ಕಂಡುಕೊಳ್ಳುವ ಜಗತ್ತಿಗೆ ಹೊಂದಿಕೊಂಡಂತೆ ಕೈಗೊಳ್ಳುವ ತೀರ್ಮಾನವೇ ಪುರುಷಾರ್ಥವು; ಅದೇ ಜೀವಾತ್ಮನ ಕೊನೆಯ ಮಜಲು–ಎಂದೇ ಲೌಕಿಕರು ಭಾವಿಸಿರುತ್ತಾರೆ. ಆದರೆ ವೇದಾಂತಶಾಸ್ತ್ರವು ಈ ತೀರ್ಮಾನವನ್ನು ಒಪ್ಪುವದಿಲ್ಲ. ಏಕೆಂದರೆ ಇದು ಜೀವಾತ್ಮನಿಗೆ ಸಂಭವಿಸುವ ಅವಸ್ಥೆಗಳಲ್ಲೊಂದಾದ ಎಚ್ಚರದಂತೆ ಕೈಗೊಂಡ ಏಕದೇಶದ ತೀರ್ಮಾನವಾಗಿರುತ್ತದೆ. ಎಚ್ಚರವೇ ಪರಮವೆಂದಾಗಿದ್ದರೆ ಉಳಿದವಸ್ಥೆಗಳ ಅನುಭವವೇಕೆ ಜೀವನಿಗೆ ಸಂಭವಿಸಬೇಕು? ಬೇಡ ಬೇಡವೆಂದರೂ ಉಳಿದೆರಡು ಅವಸ್ಥಾನುಭವಗಳು ಕಡ್ಡಾಯವಾಗಿ ಜೀವಾತ್ಮನಿಗೇಕೆ ಉಂಟಾಗುತ್ತಿವೆ? ಆದ್ದರಿಂದ ಎಚ್ಚರದ ಪಕ್ಷಪಾತದಿಂದ ಕೈಗೊಂಡಿರುವ ಲೌಕಿಕರ ತೀರ್ಮಾನವು ಆತ್ಮಸ್ವರೂಪನಿರ್ಧಾರಣೆಗೆ ಸಮರ್ಥವಾಗಿಲ್ಲ. ಅದರ ಬದಲು ಜೀವಾತ್ಮನಿಗೆ ಸಂಭವಿಸುವ ಅವಸ್ಥಾತ್ರಯಗಳ ಅನುಭವಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡು ಪೂರ್ಣವಾಗಿಯೇ ವಿಚಾರಮಾಡಬೇಕು. ಆಗಲೇ ನಿಜವು ಗೊತ್ತಾದೀತು–ಎಂದು ಹೇಳುತ್ತದೆ. ಈ ವಿಚಾರವನ್ನು ನಾವು ತಳ್ಳಿಹಾಕುವಂತಿಲ್ಲ. ಮತ್ತು ಇದರ ವಿವರಣೆಗಾಗಿ ಮತ್ತೆ ವೇದಾಂತಶಾಸ್ತ್ರಕ್ಕೇ ನಾವು ಶರಣುಹೋಗಬೇಕಾಗಿದೆ. ಹೀಗೆ ಉಪನಿಷತ್ತುಗಳಲ್ಲಿರುವ ಅವಸ್ಥಾತ್ರಯವಿಚಾರಪ್ರಕ್ರಿಯೆಯನ್ನು ಪ್ರಸ್ತಾಪಿಸಿ ಬಾದರಾಯಣಸೂತ್ರಗಳಲ್ಲಿ ವೇದಾಂತಾರ್ಥನಿರ್ಣಯವನ್ನು ಮಾಡಿರುತ್ತದೆ.

ಈಗ ಅಧಿಕರಣಾರ್ಥವನ್ನು ಚಿಂತಿಸೋಣ. ಬ್ರಹ್ಮಸೂತ್ರಗಳ ಮೂರನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ಒಂದರಿಂದ ಆರರವರೆಗಿನ ಸೂತ್ರಗಳಲ್ಲಿ

ಜೀವಾತ್ಮನ ಸ್ವಪ್ನಾವಸ್ಥೆಯನ್ನು ಕುರಿತು ವಿಚಾರಮಾಡಿರುತ್ತದೆ. ಯಾವಾಗಲೂ ವಿಚಾರವು ಎಚ್ಚರದಲ್ಲೇ ಆಗಬೇಕಾಗಿರುವದರಿಂದ ತಾತ್ಕಾಲಿಕವಾಗಿ ಎಚ್ಚರದ ದೃಷ್ಟಿಯನ್ನವಲಂಬಿಸಿಯೇ ಸಾಮಾನ್ಯನಿರ್ಣಯಗಳನ್ನು ಮಂಡಿಸಿರುತ್ತದೆ. ಇಲ್ಲಿ ಮೊದಲನೇ ಎರಡು ಸೂತ್ರಗಳಲ್ಲಿ ಪೂರ್ವಪಕ್ಷವನ್ನೂ ಅನಂತರ ಸಿದ್ಧಾಂತವನ್ನೂ ಮಂಡಿಸಲಾಗಿದೆ. ಪೂರ್ವಪಕ್ಷದ ಅಭಿಪ್ರಾಯವೇನೆಂದರೆ "ಸಂಧ್ಯದಲ್ಲಿ ಎಂದರೆ ಸ್ವಪ್ನದಲ್ಲಿ ಆತ್ಮನು ಸೃಷ್ಟಿಮಾಡುತ್ತಾನೆ- ಎಂದು ಬೃಹದಾರಣ್ಯಕಶ್ರುತಿಯಲ್ಲಿ ಹೇಳಿರುವದರಿಂದ ಶ್ರುತಿಪ್ರಮಾಣದಂತೆ ಸೃಷ್ಟಿಯು ನಿಜವೇ ಆಗಿರಬೇಕು. ಅವನೇ ಸೃಷ್ಟಿಕರ್ತನು ಎಂಬ ಅವಧಾರಣೆಯೂ ಇದೆ. ಇನ್ನು ಕಠೋಪನಿಷತ್ತಿನಲ್ಲಿ ಹೀಗೆಂದಿದೆ : 'ಇಂದ್ರಿಯಾದಿಗಳು ಮಲಗಿರುವಲ್ಲಿ ಈ ಆತ್ಮನು ತಾನು ಎಚ್ಚರವಾಗಿದ್ದು ಇಷ್ಟಾನುಸಾರ ಪುತ್ರಾದಿರೂಪವಾದ ಸೃಷ್ಟಿಯನ್ನು ಮಾಡುವನು' ಎಂದಿದೆ. ಹೀಗಿರುವಲ್ಲಿ ಕನಸೇಕೆ ಸುಳ್ಳಾಗಬೇಕು ? ಎಚ್ಚತ್ತಮೇಲೂ ಕನಸು ಬಾಧಿತವಾದರೂ ಕನಸನ್ನು ಅನುಭವಿಸಿದ್ದು ಉಂಟೆಂದು ಒಪ್ಪುವೆವಲ್ಲ? ಆದ್ದರಿಂದ ಕನಸುಕೂಡ ನಿಜವೇ ಆಗಲಿ-ಎಂಬುದು ಪೂರ್ವಪಕ್ಷಿಯ ಅಭಿಪ್ರಾಯ. ಸಿದ್ಧಾಂತವೇನೆಂದರೆ: ಸ್ವಪ್ನವು ನಿಜವಲ್ಲ. ಅದು ಮಾಯಾಮಾತ್ರವೇ. ಏಕೆಂದರೆ ಸಂಪೂರ್ಣವಾಗಿ ಅಲ್ಲಿ ದೇಶಕಾಲನಿಮಿತ್ತಾದಿಸಂಪತ್ತಿಗಳಿರುವದಿಲ್ಲ- ಎಂಬಿದೇ ಆಗಿದೆ. ಇದರ ವಿವರವೇನೆಂದರೆ : ರಾತ್ರಿ ಮಲಗಿರುವಾಗ ಕನಸು ಬಿದ್ದರೆ, ಅದರಲ್ಲಿ ರಥ, ಆನೆ-ಮುಂತಾದವುಗಳನ್ನು ನೋಡಿದರೆ ಅವು ಕಲ್ಪಿತವಾದವುಗಳಾಗಿರಬೇಕೇ ಹೊರತು ನಿಜವಾದವುಗಳಾಗಲಾರವು. ಅತ್ಯಲ್ಪವಾದ ಹೃದಯದೇಶದಲ್ಲಿ ಕನಸುಗಳನ್ನು ಕಾಣುವಾಗ ಆನೆ ಮುಂತಾದವು ಅಲ್ಲಿ ಹಿಡಿಯುವದು ಹೇಗಾದೀತು? ಮತ್ತು ಕೆಲವೇ ಗಂಟೆಗಳ ಕನಸಿನಲ್ಲಿ ವರ್ಷಗಟ್ಟಲೆ ಕಾಲಕಳೆದಂತೆ ಭಾಸವಾಗುತ್ತದೆ. ಇದೂ ಸಹ ಕನಸು ನಿಜ- ಎನ್ನುವದಕ್ಕೆ ಅಡ್ಡಿಯಾಗಿರುತ್ತದೆ. ಮತ್ತು ಎಚ್ಚರದಿಂದ ನಿದ್ರೆಗೆ ಹೋಗುವಾಗ ಇಂದ್ರಿಯಗಳೆಲ್ಲವೂ ವಿಶ್ರಾಂತಿಯನ್ನು ಹೊಂದಿರುತ್ತವೆ. ಪುನಃ ಕನಸಿನಲ್ಲಿ ಕಾಣುವದು, ಮುಟ್ಟುವದು- ಇತ್ಯಾದಿಗಳು ಆಯಾ ಇಂದ್ರಿಯಗಳಿಲ್ಲದೆ ಹೇಗಾದೀತು ? ಮತ್ತು ಎಚ್ಚರುತ್ತಲೂ ಕನಸಿನಲ್ಲಿ ಕಂಡ ವಸ್ತುಗಳೆಲ್ಲವೂ ಕಣ್ಮರೆಯಾಗಿಬಿಡುವದು. ನಾವು ಕನಸಿನಲ್ಲಿ ಕಂಡ ನೆಂಟರಿಷ್ಟರಿಗೆ ನಮ್ಮ ಕನಸಿನ ಅನುಭವವೇ ಇರುವದಿಲ್ಲ. ಎಚ್ಚತ್ತಮೇಲೆ ಯಾರನ್ನಾದರೂ 'ನೀನು ನನ್ನ ಕನಸಿನಲ್ಲಿ ಬಂದಿದ್ದೆಯಲ್ಲವೆ ?' ಎಂದು ಕೇಳಿದರೆ ಅವನು ತಬ್ಬಿಬ್ಬಾಗುತ್ತಾನೆ. ಆದ್ದರಿಂದ ಕನಸು ಮಾಯಾಮಾತ್ರವೇ ಹೊರತು ನಿಜವಲ್ಲ-ಎಂದೇ ತಿಳಿಯಬೇಕು- ಹೀಗೆಂಬ ವ್ಯಾವಹಾರಿಕಸಿದ್ಧಾಂತವನ್ನು ಮಂಡಿಸಲಾಗಿದೆ. ಮತ್ತೆ ವಿಚಾರಮಾಡೋಣ.

---

(ಸಶೇಷ)

# ಶ್ರೀಶ್ರೀಗಳವರ ಸಾರಸ್ವತಸೇವೆ

( ವಿದ್ಯಾಲಂಕಾರ ಪ್ರೊ. ಎಸ್. ಕೆ. ರಾಮಚಂದ್ರ ರಾಯರು )*

ಪೂಜ್ಯ ಶ್ರೀಶ್ರೀಗಳವರ ಆರಾಧನೋತ್ಸವಸಂದರ್ಭದಲ್ಲಿ ಅವರ ಸಾರಸ್ವತ ಸೇವೆಯನ್ನು ಕುರಿತು ಮಹಾಜನರ ಮುಂದೆ ಕೆಲವು ವಿಷಯಗಳನ್ನು ಮಂಡಿಸುವ ಮೂಲಕ ನನ್ನ ಭಕ್ತಿಕಾಣಿಕೆಯನ್ನು ಅರ್ಪಿಸಲು ಹೊರಟಿದ್ದೇನೆ. ಪೂಜ್ಯ ಶ್ರೀಗಳವರು ತಮ್ಮ ಇಡಿಯ ಆಯುಷ್ಯಕಾಲದ ದೀರ್ಘಚಿಂತನೆಗಳನ್ನು ನೂರಾರು ಗ್ರಂಥಗಳ ರೂಪದಲ್ಲಿ ಹೊರಗೆಡಹಿರುತ್ತಾರೆ. ಲೋಕದಲ್ಲಿ ಅನೇಕ ಪಂಡಿತರಿದ್ದಾರೆ. ಅವರುಗಳ ಕೃತಿಗಳು ತಾತ್ಕಾಲಿಕಲಾಭದ ಗುರಿಯನ್ನು ಹೊಂದಿರುವದೇ ಹೆಚ್ಚು. ಶ್ರೀಗಳ ವಾಙ್ಮಯತಪಸ್ಸು ಅಂಥದ್ದಲ್ಲ. ಬರಹಚಾಪಲ್ಯಕ್ಕೆ ಒಳಗಾಗಿ ಅವರು ಗ್ರಂಥಗಳನ್ನು ರಚಿಸಲಿಲ್ಲ. ಮತ್ತೇನೆಂದರೆ ಹೊಸದಾಗಿ ಬರೆಯಬೇಕಾದದ್ದಿದೆ– ಜನರಿಗೆ ಇದರಿಂದ ಶಾಶ್ವತಲಾಭವಾಗಲಿದೆ– ಎಂದು ಪ್ರಜ್ಞೆಯಿಂದಲೇ ಬರೆದಿರುತ್ತಾರೆ. ಇವರ ಒಂದೊಂದು ಕೃತಿಯೂ ಅಪೂರ್ವವಾದುದು. ಬರೆದಿರುವದೆಲ್ಲ ಗಟ್ಟಿ ಅಪರಂಜಿ ಚಿನ್ನವೇ ಹೊರತು ವ್ಯರ್ಥವಾದದ್ದು ಒಂದೂ ಇರುವದಿಲ್ಲ. ಶ್ರೀ ಸುರೇಶ್ವರಾಚಾರ್ಯರು ಒಂದು ಕಡೆ 'ನ ಖ್ಯಾತಿಲಾಭಪೂಜಾರ್ಥಂ.... ಉದೀರ್ಯತೇ' (ಖ್ಯಾತಿಲಾಭಪೂಜೆಗಳಿಗಾಗಿ ನಾವು ಗ್ರಂಥರಚನೆಮಾಡುವದಿಲ್ಲ) ಎಂದಿರುತ್ತಾರೆ. ಶ್ರೀಶ್ರೀಗಳವರ ಗ್ರಂಥರಚನೆಯೂ ಇದೇ ಮಟ್ಟದ್ದಾಗಿದೆ. ಜನಗಳಿಗೆ ಅದರಲ್ಲಿಯೂ ಶ್ರೇಯೋಮಾರ್ಗದಲ್ಲಿ ಮುನ್ನಡೆಯುತ್ತಿರುವವರಿಗೆ ಈ ಗ್ರಂಥಗಳಿಂದ ಲಾಭವಾದೀತು– ಎಂಬ ಆಸೆಯೊಂದೇ ಅವರ ಬರವಣಿಗೆಗಳಿಗೆ ಪ್ರೇರಕವಾಗಿದೆ. ಲೋಕಸಂಗ್ರಹಬುದ್ಧಿಯು ಶ್ರೀಶ್ರೀಗಳವರ ಉದಾತ್ತಧ್ಯೇಯವಾಗಿತ್ತು–ಎಂಬಿದರಲ್ಲಿ ಸಂಶಯವಿಲ್ಲ.

ಈ ಮಹನೀಯರ ಗ್ರಂಥರಾಶಿಯನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಪಂಡಿತವರ್ಗದವರಿಗಾಗಿ ರಚಿಸಿದವುಗಳು. ಎರಡನೆಯದು ಜನಸಾಮಾನ್ಯರಿಗಾಗಿ (ಪಾಮರಿಗಾಗಿ) ರಚಿಸಿದವುಗಳು. ಪಂಡಿತವರ್ಗದವರಿಗಾಗಿ ಬರೆಯಲ್ಪಟ್ಟಿರುವ ಕೃತಿರತ್ನಗಳಲ್ಲಿ 'ವೇದಾಂತಪ್ರಕ್ರಿಯಾಪ್ರತ್ಯಭಿಜ್ಞಾ' ಎಂಬ ಮಹಾನಿಬಂಧರೂಪವಾದ ಸಂಸ್ಕೃತಗ್ರಂಥವು ಮೇರುಕೃತಿಯಾಗಿದೆ. ಇನ್ನು ಸಾಮಾನ್ಯಜನರಿಗಾಗಿ ಬರೆದ ಗ್ರಂಥಗಳ ಸಂಖ್ಯೆಯೇ ಹೆಚ್ಚಾಗಿದೆ. ವೇದಾಂತವನ್ನು ಬೋಧಿಸುವದು– ಅದರಲ್ಲಿಯೂ ಬರಹರೂಪದಿಂದ ಜನರ ಮುಂದಿಡುವದು ಸುಲಭದ ಕೆಲಸವಲ್ಲ. ಸಾಮಾನ್ಯಜನರಿಗೆ ಈ ಮಹಾದರ್ಶನವನ್ನು ತಿಳಿಸುವಾಗ ಎಷ್ಟನ್ನು ಮಾತ್ರ ಹೇಳಬೇಕು? ಹೇಗೆ ಹೇಳಬೇಕು? ಎಷ್ಟು ಹೇಳಿದರೆ ಪ್ರಯೋಜನ

* ತಾ॥ 30–7–86ನೇ ಬುಧವಾರ ಬೆಂಗಳೂರಿನ ಅಧ್ಯಾತ್ಮಪ್ರಕಾಶಕಾರ್ಯಾಲಯದಲ್ಲಿ ಶ್ರೀಯುತರು ಮಾಡಿದ ಉಪನ್ಯಾಸವನ್ನು ಅವರ ಶಿಷ್ಯರು ಬರೆದುಕೊಂಡ ಟಿಪ್ಪಣಿಗಳ ಆಧಾರದಿಂದ ಲೇಖನವಾಗಿ ಮಾರ್ಪಡಿಸಿ ಕೊಡಲಾಗಿದೆ.

ವಾದೀತು ? ಎಂಬ ಔಚಿತ್ಯಪ್ರಜ್ಞೆ ಶ್ರೀಗಳವರ ಸ್ವತ್ತಾಗಿತ್ತು. ಅನಧಿಕಾರಿಗಳಿಗೆ ಹೇಳಬಹುದಾದದ್ದೆಷ್ಟು ? ಅಧಿಕಾರಿಗಳಿಗೆ ಹೇಳಬಹುದಾದದ್ದೆಷ್ಟು ? ಎಂಬ ವಿವೇಕವು ಅವರ ಗ್ರಂಥಗಳಲ್ಲೆಲ್ಲ ಎದ್ದುಕಾಣುತ್ತಿದೆ. ಉದಾಹರಣೆಗೆ 'ವೇದಾಂತ ವಿಚಾರದ ಇತಿಹಾಸ' ಎಂಬ ಗ್ರಂಥದಲ್ಲಿ ಸುಮಾರು ಹನ್ನೊಂದು ಜನ ವೇದಾಂತಾ ಚಾರ್ಯರುಗಳ ಮಹಾಗ್ರಂಥಗಳ ಸಾರವನ್ನೇ ಸರಳಶೈಲಿಯಲ್ಲಿ ಸಂಕ್ಷಿಪ್ತವಾಗಿ ಹಿಂಡಿಕ್ಟಿರುತ್ತಾರೆ. ಇದೊಂದು ಅತ್ಯದ್ಭುತಸಾಧನೆ- ಎಂದು ಹೇಳದೆ ವಿಧಿಯಿಲ್ಲ. ಮತ್ತು ಅಧ್ಯಾತ್ಮಶಾಸ್ತ್ರದ ರಹಸ್ಯಗಳನ್ನು ವಿವರಿಸುವಾಗ ಪ್ರಕರಣಾನುಗುಣವಾಗಿ ಜ್ಞಾನ, ಉಪಾಸನೆ, ಕರ್ಮಯೋಗಗಳ ವಿಚಾರಗಳನ್ನು ಪರಸ್ಪರ ಕಲೆಬೆರಕೆ ಮಾಡದೆ ಶುದ್ಧವಾಗಿ ಓದುಗರಿಗೆ ಗೊತ್ತಾಗುವಂತೆ ಹಾಗೂ ಓದುಗರ ಕಾಲಹರಣ ವಾಗದಂತೆ ಅಚ್ಚುಕಟ್ಟಾಗಿ ನಿವೇದಿಸಿರುವ ಕ್ರಮವು ಎಂಥವನನ್ನಾದರೂ ಆಕರ್ಷಿಸದೆ ಇರದು.

ಶ್ರೀಗಳವರ ಗ್ರಂಥಗಳ ಮತ್ತೊಂದು ವಿಶೇಷವೆಂದರೆ : ದೇಶಕಾಲಾನುಗುಣ ವಾದ ಹಾಗೂ ಸನ್ನಿವೇಶಕ್ಕೊಪ್ಪುವ ರೀತಿಗಳಿಂದ ವಿಶಾಲವಾದ ತಳಹದಿಯಲ್ಲಿ ತತ್ತ್ವವನ್ನು ನಿರೂಪಣೆಮಾಡುವ ಕ್ರಮವು-ಎನ್ನಬಹುದು. ವೇದಾಂತವಿಚಾರವು ದೇಶಕಾಲಭಾಷಾದಿಗಳ ಚೌಕಟ್ಟನ್ನು ಮೀರಿರುತ್ತದೆ. ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ತತ್ತ್ವವಿಚಾರಕರಿದ್ದೇ ಇರುತ್ತಾರೆ. ಮುಮುಕ್ಷುಗಳೂ ಇರುತ್ತಾರೆ. ಆದ್ದರಿಂದ ಪಾಶ್ಚಾತ್ಯರು ಸಹ ಜೀವ, ಜಗತ್ತು, ಈಶ್ವರರುಗಳ ಬಗ್ಗೆ ಏನು ಹೇಳುತ್ತಿದಾರೆ ? ನಮ್ಮ ಋಷಿಗಳ ಅಭಿಪ್ರಾಯವೇನು ? ಎಂಬಿದನ್ನು ಸಮಯಾನುಸಾರವಾಗಿ ನಿರೂಪಿಸದೆ ಇರಲು ಸಾಧ್ಯವಿಲ್ಲ. ಆದರೆ ಸಾಮಾನ್ಯ ವಿಚಾರಕನು ಬುದ್ಧಿಬಲದಿಂದ ಇಂಥ ವಿಷಯಗಳನ್ನು ಅಧ್ಯಯನಮಾಡಿ ಚಿಂತಿಸಿದ ಮೇಲೆ ತಾನು ಏನನ್ನು ತಿಳಿಯಬೇಕು ? ಎಲ್ಲಿ ನಿಲ್ಲಬೇಕು ? ಎಂಬ ವಿವೇಕವಿಲ್ಲದೆ ಗೊಂದಲಕ್ಕೆ ಈಡಾಗುವ ಸಂಭವವಿದೆ. ಇದು ಈಗಿನ ಸ್ಥಿತಿಯಾಗಿದೆ. ಶ್ರೀಶಂಕರಾ ಚಾರ್ಯರ ಕಾಲಕ್ಕೆ ಇಂಥ ಅನಿಶ್ಚಿತಪರಿಸ್ಥಿತಿಯಿರಲಿಲ್ಲ. ಆಗಿನ ಕಾಲದ ಮುಮುಕ್ಷು ಗಳು ಧನ್ಯರೇ ಸರಿ. ನಮ್ಮ ಕಾಲಕ್ಕಾದರೊ, ವಿಚಾರಕ್ಷೇತ್ರದಲ್ಲಿ ಸಂಭವಿಸಿರುವ ಗೊಂದಲದ ನಡುವೆ ಉಪನಿಷತ್ತತ್ತ್ವವನ್ನು ನಂಬಿ ನಾವು ಬಾಳಲು ಸಾಧ್ಯವೆ ? ವಿಚಾರಪ್ರವಾಹದಲ್ಲಿ ನಮ್ಮ ದರ್ಶನವು ಎಷ್ಟು ಬಲವನ್ನು ನೀಡೀತು? ಸಂಪ್ರದಾಯ ಗಳ ಸುಳಿಯಲ್ಲಿ ಸಿಕ್ಕಿಹಾಕಿಕೊಂಡಿರುವ ಈ ಉಪನಿಷದ್ದರ್ಶನವು ಸಾರ್ವತ್ರಿಕವೂ ಅನುಭವಪೂರ್ಣವೂ ಅಬಾಧಿತವೂ ಆಗಿ ನಿಲ್ಲಬಲ್ಲದೆ ? ಎಂಬೀ ವಿಷಯಗಳನ್ನು ಶ್ರೀಶ್ರೀಗಳವರು ತಮ್ಮ ಇಂಗ್ಲಿಷುಕೃತಿಗಳಲ್ಲಿ ಚೆನ್ನಾಗಿ ಶೋಧಿಸಿ ಪ್ರಬಲವಾದ ರೀತಿಯಿಂದ ಸಮರ್ಥಿಸಿ ತೋರಿಸಿದ್ದಾರೆ. ಈ ಕೆಲಸವನ್ನು ಈಚಿನ ಶತಮಾನಗಳಲ್ಲಿ ಯಾವ ಪಂಡಿತರೂ ಮಾಡಲಿಲ್ಲ- ಎಂದು ಹೇಳಿದರೆ ತಪ್ಪಾಗಲಾರದು. ಈ ವಿಷಯಕ್ಕೆ ಶ್ರೀಗಳವರ "How to Recognize the Method of Vedanta" ಎಂಬ ಗ್ರಂಥವನ್ನು ಜಿಜ್ಞಾಸುಗಳು ಓದಬೇಕು.

ಶ್ರೀಶ್ರೀಗಳವರ ಬರವಣಿಗೆಗಳಲ್ಲಿ ಮತ್ತೊಂದು ಜವಾಬ್ದಾರಿಯ ವಿಷಯವು ಎದ್ದು ಕಾಣುತ್ತಿದೆ. ಹಿಂದಿನ ಕಾಲದ ಪಂಡಿತರುಗಳಲ್ಲಿ ಪಠ್ಯಗ್ರಂಥಗಳನ್ನೋದಿ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಸಮಾಜದಲ್ಲಿ ಗಣ್ಯರೆನಿಸಿಕೊಂಡರೆ ತಮ್ಮ ಕೆಲಸವು ಪೂರೈಸಿತು-ಎಂದು ಭಾವಿಸಿಕೊಂಡಿದ್ದವರೇ ಬಹಳ ಮಂದಿ. ಆದ್ದರಿಂದಲೇ ಅವರುಗಳಿಗೆ ಸಾಮಾಜಿಕಕರ್ತವ್ಯಗಳೇನು? ಇದರಲ್ಲಿ ತನ್ನ ಪಾತ್ರವೇನು? ಎಂಬ ಚಿಂತೆಯು ಹೊಳೆದಿರಲಿಲ್ಲ. ಶ್ರೀಗಳವರ ಜೀವನದಲ್ಲಿ ಹಾಗಾಗಲಿಲ್ಲ. ಇದಕ್ಕೆ ಕಾರಣ ಅವರಿಗೆ ಉಂಟಾದ ಸತ್ಯದರ್ಶನ. ಈ ಸತ್ಯದರ್ಶನದ ಫಲವಾಗಿ ಅವರು ತಮ್ಮ ಹೊಣೆಯನ್ನು ಅರ್ಥಮಾಡಿಕೊಂಡು ತಾನು ಕಂಡುಕೊಂಡ ಸತ್ಯವನ್ನು ಮರೆಮಾಚದೆ ಇತರರಿಗೂ ತಿಳಿಯಹೇಳಬೇಕೆಂಬ ಪ್ರೇರಣೆಗೆ ಒಳಗಾಗಿ ಗ್ರಂಥಗಳನ್ನು ರಚಿಸಿ, ಬೋಧಿಸಿ, ಸಾಮಾಜಿಕಋಣವನ್ನು ಪರಿಹರಿಸಿಕೊಂಡರು. ಇಂಥ ಸೂಕ್ಷ್ಮಪ್ರಜ್ಞೆಯು ಪುಸ್ತಕಪಂಡಿತರಿಗೆ ಎಲ್ಲಿಂದ ಬರಬೇಕು? ಇದರ ಫಲವಾಗಿಯೇ ಶುದ್ಧಶಾಂಕರದರ್ಶನದ ಆವಿರ್ಭಾವವು ಉಂಟಾಯಿತು. ಇದು ಬೌದ್ಧಿಕವಾದುದಲ್ಲ. ಅಥವಾ ಪರೋಪದೇಶಪಾಂಡಿತ್ಯವಲ್ಲ. ಮತ್ತೇನೆಂದರೆ: ಅನುಷ್ಠಾನದ ಒರೆಗಲ್ಲಿಗೆ ತಿಕ್ಕಿ ಎಂದೆಂದೂ ಬದಲಾಗದಂತೆ ಕಂಡುಕೊಂಡ ದಿವ್ಯದರ್ಶನವು. ಈ ದರ್ಶನದ ನಾನಾಮುಖಗಳನ್ನು ನಾನಾರೀತಿಯ ಕ್ರಮಗಳಿಂದಲೂ ಪ್ರತಿಪಾದನೆಯಿಂದಲೂ ಶ್ರೀಗಳವರು ತಮ್ಮ ಅಮೋಘಗ್ರಂಥಗಳಲ್ಲಿ ಪ್ರತಿಬಿಂಬಿಸಿರುತ್ತಾರೆ. ಇಂಥ ಸಾರಸ್ವತಸೇವೆಯನ್ನು ಈ ಶತಮಾನದಲ್ಲಿ ಮಾಡಿರುವವರು- ಅದರಲ್ಲಿಯೂ ವೇದಾಂತ ಕ್ಷೇತ್ರದಲ್ಲಿ ಸಲ್ಲಿಸಿರುವವರು- ಬೇರೆ ಯಾರಿದ್ದಾರು?

ಶ್ರೀಶ್ರೀಗಳವರ ಗ್ರಂಥರಾಶಿಯನ್ನು ಮತ್ತೊಂದು ರೀತಿಯಿಂದ ಮೂರು ತರಗತಿಗಳಾಗಿ ವಿಂಗಡಿಸಬಹುದು. ಮೊದಲನೆಯದು ಅವರು ರಚಿಸಿರುವ ಶಾಂಕರಪ್ರಸ್ಥಾನತ್ರಯಭಾಷ್ಯಗಳ ಕನ್ನಡಾನುವಾದಗಳು. ಹಾಗೂ ಸಂಸ್ಕೃತಭಾಷೆಯಲ್ಲಿ ಟಿಪ್ಪಣಿಗಳೊಡನೆ ಸಂಪಾದಿಸಿ ಪ್ರಕಟಿಸಿರುವ ಕೆಲವು ಉಪನಿಷದ್ಭಾಷ್ಯಗಳು, ತೈತ್ತಿರೀಯೋಪನಿಷತ್ತಿನ ಭಾಷ್ಯದಮೇಲೆ ಬರೆದಿರುವ ಭಾಷ್ಯಾರ್ಥವಿಮರ್ಶಿನೀವ್ಯಾಖ್ಯಾನ, ಸೂತ್ರಭಾಷ್ಯದಮೇಲೆ ಬರೆದಿರುವ ತತ್ತ್ವವಿವೇಚನೀ-ಎಂಬ ವ್ಯಾಖ್ಯಾನ-ಇತ್ಯಾದಿ. ಇವುಗಳಲ್ಲಿ ಪ್ರಸ್ಥಾನತ್ರಯಭಾಷ್ಯದ ಕನ್ನಡಾನುವಾದಗಳು ವೇದಾಂತವ್ಯಾಸಂಗನಿಷ್ಠರಿಗೆ- ಅದರಲ್ಲಿಯೂ ಸಂಸ್ಕೃತಭಾಷಾಜ್ಞಾನವಿಲ್ಲದ- ಆದರೆ ಶಂಕರಭಾಷ್ಯಗಳನ್ನೋದಿ ತಮ್ಮ ವಿಚಾರದ ಹಸಿವನ್ನು ನೀಗಿಕೊಳ್ಳಬೇಕೆಂದು ತವಕಿಸುತ್ತಿರುವವರಿಗೆ ಕಾಮಧೇನುವಿನಂತಿವೆ. ಇವುಗಳನ್ನು ಸಿದ್ಧಗೊಳಿಸುವಾಗ ಶ್ರೀಗಳವರು ಸಂಸ್ಕೃತಭಾಷೆಗೆ ಅಪಚಾರವಾಗದಂತೆ- ಆದರೆ ಓದುಗರಿಗೆ ತೊಡಕಾಗದಂತೆ ಸಾಹಿತ್ಯವನ್ನು ಬಿಡಿಸಿ ಮೂಲಕ್ಕೆ ಕುಂದುಬರದಂತೆ ಅರ್ಥಪೂರ್ಣವಾದ ತಲೆಬರಹಗಳೊಡನೆ ಅಚ್ಚುಮಾಡಿಸಿರುವದು, ಸರಳವಾದ ಕನ್ನಡಾನುವಾದ, ವಿಷಯಪ್ರತಿಪಾದನೆಗೆ ಅಗತ್ಯವಾದ ಹಿತಮಿತವಾದ ಟಿಪ್ಪಣಿಗಳು, ವಿಮರ್ಶಾತ್ಮಕ ಪೀಠಿಕೆ, ಶಬ್ದಕೋಶ-

ಮುಂತಾದ ಸೌಕರ್ಯಗಳೊಡನೆ ಆಂಗ್ಲಭಾಷೆಯ ಗ್ರಂಥಗಳಂತೆ ಸಕಲಪರಿಕರೋಪೇತವಾಗಿ ಸಿದ್ಧಗೊಳಿಸಿ ನೀಡಿರುತ್ತಾರೆ. ಎರಡನೆಯ ತರಗತಿಯ ಗ್ರಂಥಗಳಲ್ಲಿ ಪ್ರಸ್ಥಾನತ್ರಯಗಳ ಸಾರವನ್ನು ಸಂಪ್ರದಾಯಧೋರಣೆಗೆ ಅನುಗುಣವಾಗಿ ಮತ್ತು ಈಗಿನ ವಿಮರ್ಶನವಿಚಕ್ಷಣರಿಗೆ ಒಪ್ಪಾಗುವಂತೆ ಯುಕ್ತಿಯುಕ್ತವಾಗಿ ಅನುಭವ ಪರ್ಯವಸಾಯಿಯಾಗುವಂತೆ ಹೆಣೆದು ಸರಳಕನ್ನಡದಲ್ಲಿ ಒದಗಿಸಿರುತ್ತಾರೆ. ಶಾಂಕರ ವೇದಾಂತಪ್ರಕ್ರಿಯೆ, ಶಂಕರವೇದಾಂತಸಾರ, ಶಾಂಕರವೇದಾಂತದ ಮೂಲತತ್ತ್ವಗಳು- ಇವೇ ಮುಂತಾದವನ್ನು ಇಲ್ಲಿ ಹೆಸರಿಸಬಹುದಾಗಿದೆ. ಇವುಗಳ ಜೊತೆಗೆ ಅನುಶಾಂಕರವೇದಾಂತಗ್ರಂಥಾವಳಿಯು ನೈಷ್ಕರ್ಮ್ಯಸಿದ್ಧಿಯೂ ಸೇರಿರುತ್ತದೆ. ಪ್ರಕರಣಗ್ರಂಥಗಳನ್ನೂ ಇದೇ ವರ್ಗದಲ್ಲಿ ಅಡಕಮಾಡಬಹುದಾಗಿದೆ. ಇವುಗಳಲ್ಲೆಲ್ಲ ಶ್ರೀಗಳು ನಿಷ್ಪಕ್ಷಪಾತವಾದ ಧೋರಣೆಯನ್ನು ಅನುಸರಿಸಿ ಶಾಂಕರವೇದಾಂತಕ್ಕೆ ಅಪಚಾರವಾಗದಂತೆ ಸಮಯಾನುಸಾರವಾಗಿ ಖಂಡನ-ಮಂಡನಗಳನ್ನೂ ಪ್ರಸ್ತಾಪಿಸಿರುತ್ತಾರೆ.

ಮೇಲ್ಕಂಡ ಗ್ರಂಥಗಳನ್ನು ಓದಿ ಅರಗಿಸಿ ಮನನಮಾಡಿಕೊಳ್ಳುವಂಥ ಯೋಗ್ಯತೆಯಾಗಲಿ ಬುದ್ಧಿಮಟ್ಟವಾಗಲಿ ಇಲ್ಲದ ಸಾಮಾನ್ಯಜನರಿಗಾಗಿ ಮೂಲತತ್ತ್ವಗಳನ್ನೇ ವಿವರಿಸಿ ಹೇಳುವಂಥ- ಆದರೆ ಶಾಸ್ತ್ರವಾಕ್ಯಗಳನ್ನು ಬಳಸದೆ ಶಾಸ್ತ್ರಾರ್ಥವನ್ನೇ ಮನನಮಾಡಿಸುವಂಥ ಗ್ರಂಥಗಳನ್ನೂ ಶ್ರೀಗಳು ರಚಿಸಿದ್ದಾರೆ. ಇಂಥವುಗಳಲ್ಲಿ 'ಪರಮಾರ್ಥಚಿಂತಾಮಣಿ' ಎಂಬುದು ಅತ್ಯಮೂಲ್ಯಗ್ರಂಥವಾಗಿದೆ. ಶ್ರೀಗಳವರು ಕನ್ನಡ, ಇಂಗ್ಲಿಷ್, ಸಂಸ್ಕೃತ- ಈ ಮೂರು ಭಾಷೆಗಳಲ್ಲಿಯೂ ರಚಿಸಿರುವ ಗ್ರಂಥರಾಶಿಯಲ್ಲಿಯೇ ಇದು ಮೇರುಕೃತಿಯಾಗಿದೆ. ಇದರಲ್ಲಿ ಇಡಿಯ ವಿಶ್ವದ ತಿರುಳನ್ನು ಗೊತ್ತುಪಡಿಸುವ ಮನನಕ್ರಮವನ್ನು ವಿಸ್ತಾರವಾಗಿ ತಿಳಿಸಿದೆ. ವಿಚಾರಸರಣಿಯು ಅನುಭವ-ಯುಕ್ತಿಪೂರ್ಣವಾಗಿದೆ. ಸಚ್ಚಿದಾನಂದತತ್ತ್ವವನ್ನು ಸಾರ್ವತ್ರಿಕಾನುಭವಾನುಸಾರವಾಗಿ ದರ್ಶನಮಾಡಿಸಲಾಗಿದೆ. ಇನ್ನೂ ಕೆಲವು ಚಿಕ್ಕಪುಟ್ಟ ಗ್ರಂಥಗಳಲ್ಲಿಯೂ ಸಿದ್ಧಾಂತ-ಸಾಧನಗಳ ವಿವೇಕದಿಂದ ಆಯಾ ಗ್ರಂಥಕ್ಕೆ ತಕ್ಕಂತೆ ಅಧ್ಯಾತ್ಮವಿದ್ಯೆಯ ತಿರುಳನ್ನು ಜೋಡಿಸಿ ಬರೆದು ಉಪಕರಿಸಿದ್ದಾರೆ. ಇಷ್ಟಾದರೂ ಶ್ರೀಗಳು ಸಂಪ್ರದಾಯವನ್ನು ಬಿಟ್ಟುಹೋಗಿಲ್ಲ. ವೇದಾಂತಸಂಪ್ರದಾಯವೆಂದರೇನು ? ಎಂಬಿದರ ಮರ್ಮವನ್ನು ಶ್ರೀಗಳ ಬರವಣಿಗೆಯಿಂದಲೇ ತಿಳಿಯಬೇಕಾಗಿದೆ. ಹೀಗೆ ಬೆಳಗ್ಗೆ ಎದ್ದಾಗಿನಿಂದ ಮಲಗುವವರೆಗೂ ಹುಟ್ಟಿದಾಗಿನಿಂದ ಬದುಕಿರುವವರೆಗೂ ವೇದಾಂತಚಿಂತನೆಯಿಂದಲೇ ಕಾಲಕಳೆಯಬೇಕು- ಎಂಬ ಅಭಿಯುಕ್ತೋಕ್ತಿಗೆ ಜೀವಂತ ಉದಾಹರಣೆಯಾಗಿದ್ದ ಪೂಜ್ಯ ಶ್ರೀಶ್ರೀಗಳವರನ್ನೂ ಅವರ ಕೃತಿಗಳನ್ನೂ ಮತ್ತೊಮ್ಮೆ ವಂದಿಸಿ ನನ್ನ ಪ್ರವಚನವನ್ನು ಪೂರ್ಣಗೊಳಿಸುತ್ತೇನೆ.

---

# ಸರಸ್ವತೀಸೂಕ್ತ-೪

( ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು )

ಸರಸ್ವತೀಸೂಕ್ತದ ೮-೯ನೆಯ ಋಕ್ಕುಗಳನ್ನು ವಿಚಾರಮಾಡೋಣ :

**ಓಂ ॥ ಯಸ್ಯಾ ಅನಂತೋ ಅಹ್ರುತಸ್ತ್ವೇಷಶ್ಚರಿಷ್ಣುರರ್ಣವಃ ।**
**ಅಮಶ್ಚರತಿ ರೋರುವತ್ ॥೮॥ ಸಾ ನೋ ವಿಶ್ವಾ ಅತಿದ್ವಿಷಃ**
**ಸ್ವಸ್ರೂರನ್ಯಾ ಋತಾವರೀ । ಅತನ್ನಹೇವ ಸೂರ್ಯಃ ॥೯॥**

"ಯಾವ ಸರಸ್ವತಿಯ ಬಲವು ಅನಂತವೂ ಅಹಿಂಸಿತವೂ ದೀಪ್ತವೂ ಚರಣ ಶೀಲವೂ ಜಲಪೂರ್ಣವೂ ಆಗಿದ್ದು ಶಬ್ದಮಾಡುತ್ತಿರುವದೋ ಆ ಸರಸ್ವತಿಯು ನಮ್ಮ ಎಲ್ಲಾ ಶತ್ರುಪ್ರಜೆಗಳನ್ನೂ ಹಿಮ್ಮೆಟ್ಟಿಸಲಿ ! ಮತ್ತು ಜೊತೆಯಲ್ಲಿ ಹುಟ್ಟಿ ಹರಿಯುವ ಉಳಿದ ನದಿಗಳೂ- ಆದಿತ್ಯನು ಯಾವಾಗಲೂ ಸಂಚರಿಸುತ್ತಾ ಹಗಲುಗಳನ್ನು ಕ್ರಮಿಸುವಂತೆ- ಶತ್ರುಗಳನ್ನು ದಾಟಿಹೋಗಲಿ !"- ಎಂದಭಿಪ್ರಾಯ.

ಈ ಎರಡು ಋಕ್ಕುಗಳಲ್ಲಿಯೂ ನದೀರೂಪಳಾದ ಸರಸ್ವತಿಯನ್ನು ಸ್ತುತಿಸಲಾಗಿದೆ. ಸರಸ್ವತಿಯಂತೆಯೇ ಗಂಗಾಯಮುನಾದಿನದಿಗಳೂ ಹಿಮಾಲಯದಲ್ಲೇ ಹುಟ್ಟುವದರಿಂದ ನದಿಗಳೆಲ್ಲ ಪರಸ್ಪರಸೋದರಿಯರಿದ್ದಂತೆ- ಎಂದು ಭಾವಿಸಲಾಗಿದೆ. ಇಂಥ ಸರಸ್ವತಿಯ ಬಲವು ಅಪರಿಮಿತವಾದದ್ದು. ನೀರಿನ ಬಲವು ಬಹಳ ಹೆಚ್ಚಿನದೆಂದು ಹೇಳಬೇಕಾದದ್ದಿಲ್ಲ. ಕೆರೆಯಾಗಲಿ ಕಟ್ಟೆಯಾಗಲಿ ಪರಿಮಿತವಾದ ನೀರನ್ನು ತಡೆಯಬಲ್ಲವೇ ಹೊರತು ಹೆಚ್ಚಾದರೆ ಆ ನೀರು ಕೆರೆಕಟ್ಟೆಗಳನ್ನು ಒಡೆದುಕೊಂಡೇ ನುಗ್ಗಿಬಿಡುವದು. ಈ ಬಲವನ್ನು ದೇವಿಯ ವಿಭೂತಿಯಾಗಿ ಇಲ್ಲಿ ಸ್ತುತಿಸಿದೆ. ಅಮ ಎಂದರೆ ಬಲವೆಂದು ಭಾಷ್ಯಕಾರರು ಅರ್ಥಮಾಡಿದ್ದಾರೆ. ಬಲವು ಕೆಲವು ಸಂದರ್ಭಗಳಲ್ಲಿ ಲೋಕಕಂಟಕವಾಗುವದೂ ಉಂಟು. ಅಸುರರನ್ನಾಶ್ರಯಿಸಿರುವ ಬಲದಲ್ಲಿ ಈ ಭಯವುಂಟು. ಆದರೆ ದೇವತೆಯಾದ ಸರಸ್ವತಿಯ ಬಲವು ಅಹಿಂಸಕವಾದದ್ದು. ಮತ್ತು ಅಪರಿಮಿತವೂ ಪ್ರಕಾಶಮಾನವೂ ಎಲ್ಲೆಲ್ಲಿಯೂ ಅಡೆತಡೆಗಳಿಲ್ಲದ್ದೂ ಆಗಿರುವದು. ಇಂಥ ಬಲದಿಂದ ಯುಕ್ತಳಾದ ನದೀರೂಪಳಾದ ದೇವಿಯು ಶಬ್ದಮಾಡುತ್ತಾ ಹರಿಯುವಾಗ ನಮ್ಮ ಶತ್ರುಗಳನ್ನೆಲ್ಲ ಹಿಮ್ಮೆಟ್ಟಿಸಲಿ- ಎಂದು ಹೇಳಲಾಗಿದೆ. ಹಿಂದಿನ ಕಾಲಕ್ಕೆ ಊರು- ರಾಜಧಾನಿಗಳನ್ನು ನದಿಗಳು ಸುತ್ತುವರಿದಂಥ ಜಾಗಗಳಲ್ಲಿ ನಿರ್ಮಿಸುತ್ತಿದ್ದರು. ಶತ್ರುಗಳು ಬೇಗನೆ ಆಕ್ರಮಣ ಮಾಡದಿರಲೆಂದೇ ಹೀಗೆ ಕಟ್ಟಲಾಗುತ್ತಿತ್ತು. ರಾವಣನುಕೂಡ ಸಮುದ್ರದಾಚೆ ಲಂಕೆಯನ್ನು ನಿರ್ಮಿಸಿದ್ದನು. ಈಗಿನ ಕಾಲದಲ್ಲಿ ಇವು ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿವೆ. ಇರಲಿ ; ಹಿಂದಿನ ನಾಗರಿಕತೆಗೆ ತಕ್ಕಂತೆ ನದಿಯ ಪ್ರವಾಹವು ಶತ್ರುನಿಗ್ರಹಕ್ಕೆ ಸಾಧನವಾಗಿತ್ತು. ಇಂಥ ಪ್ರವಾಹಸಂಪನ್ನೆಯಾದ ಸರಸ್ವತಿಯು ತನ್ನ ಸೋದರಿಯರೊಡನೆ ನಮ್ಮನ್ನು ಕಾಪಾಡಲಿ- ಎಂದಭಿಪ್ರಾಯ.

ಈಗ ಹತ್ತನೆಯ ಮಂತ್ರವನ್ನು ವಿಚಾರಮಾಡೋಣ.

**ಓಂ ॥ ಉತ ನಃ ಪ್ರಿಯಾ ಪ್ರಿಯಾಸು ಸಪ್ತಸ್ವಸಾ ಸುಜುಷ್ಟಾ ।**
**ಸರಸ್ವತೀ ಸ್ತೋಮ್ಯಾಭೂತ್ ॥೧೦॥**

"ಮತ್ತು ನಮಗೆ ಪ್ರಿಯರಲ್ಲಿ ಪ್ರಿಯಳಾದ ಏಳುಮಂದಿ ಸೋದರಿಯರುಳ್ಳ, ಪುರಾತನಋಷಿಗಳಿಂದ ಸೇವಿತಳಾದ ಸರಸ್ವತಿಯು ಸ್ತೋತ್ರಕ್ಕೆ ಪಾತ್ರಳಾಗಲಿ"– ಎಂದಭಿಪ್ರಾಯ.

ಈ ಮಂತ್ರವು ನದೀರೂಪಳೂ ದೇವತಾರೂಪಳೂ ಆದ ಸರಸ್ವತಿಯನ್ನು ಸ್ತೋತ್ರಮಾಡುತ್ತದೆ. ಸರಸ್ವತಿಗೆ ಆರು ಜನ ಸೋದರಿಯರು. ಗಂಗಾ-ಯಮುನಾ-ಗೋದಾವರೀ-ನರ್ಮದಾ-ಸಿಂಧು-ಕಾವೇರಿ ಎಂಬಿವರೇ ಈ ಆರು ಜನರು. ಸರಸ್ವತಿಯು ಏಳನೆಯವಳಾಗಿ ಕೂಡಿ ಏಳು ಸೋದರಿಯರಾಗಿದ್ದಾರೆ. ನಾವು ದೇವತಾರ್ಚನೆ ಮಾಡುವಾಗ ಕಲಶಪೂಜೆಗೆ ಈ ಏಳು ನದಿಗಳ ಹೆಸರನ್ನೂ ಒಳಗೊಂಡ ಶ್ಲೋಕವನ್ನು ಪಠಿಸಿ ನಾವು ತಂದಿರುವ ಜಲದಲ್ಲಿ ಇವರೆಲ್ಲರೂ ಸನ್ನಿಹಿತರಾಗಿರಬೇಕೆಂದು ಪ್ರಾರ್ಥಿಸುತ್ತೇವೆ. ಭಾರತದಲ್ಲಿರುವ ಅನೇಕ ಮಹಾನದಿಗಳಲ್ಲಿ ಈ ಏಳು ಪುಣ್ಯತಮವಾದ ನದಿಗಳೆನಿಸಿವೆ. ಇಂಥ ಭಾಗ್ಯವು ಈ ನದಿಗಳಿಗೆ ಬಂದಿರುವದು ಪುರಾತನ ಋಷಿಗಳಿಂದ– ಎಂದು ತಿಳಿಯಬೇಕು. ಒಂದು ರೀತಿಯಲ್ಲಿ ಇದು ವನ-ಸಿಂಹ-ನ್ಯಾಯದಂತಿದೆ. ವನಕ್ಕೆ ಸಿಂಹವು ಭೂಷಣವು. ಸಿಂಹಕ್ಕೆ ವನವು ಭೂಷಣವು. ಹಾಗೆಯೇ ಋಷಿಗಳು ನದೀತೀರದಲ್ಲಿದ್ದರೆ ನದಿಗೆ ಪಾವಿತ್ರ್ಯತೆಯು. ಋಷಿಗಳಿಗೆ ನದಿಗಳೇ ಆಶ್ರಯವು. ಏಕೆಂದರೆ ಪವಿತ್ರಜಲಸನ್ನಿಧಿಯಿಲ್ಲದೆ ಅವರು ಯಾವ ಆಹ್ನಿಕಗಳನ್ನೂ ಮಾಡಲಾಗುವದಿಲ್ಲ. ಇಂಥ ಮಹರ್ಷಿಗಳ ವಾಸಸ್ಥಾನವಾದ ತಟಪ್ರದೇಶಗಳುಳ್ಳ ಪುಣ್ಯನದಿಗಳಲ್ಲಿ ಸರಸ್ವತಿಯೂ ಒಬ್ಬಳು. ಈಕೆಯು ನಮಗೆ ಅತ್ಯಂತಪ್ರಿಯಳೆಂದು ಋಷಿಯು ಇಲ್ಲಿ ಹಾಡಿರುತ್ತಾನೆ. ಇನ್ನು ವಾಗ್ರೂಪಳಾದ ಸರಸ್ವತೀದೇವಿಯೂ ತಾನೂ ಕೂಡಿ ಏಳು ಜನರುಳ್ಳವಳು. ವೇದಮಂತ್ರಗಳು ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ– ಎಂಬ ಏಳು ಛಂದಸ್ಸುಗಳಲ್ಲಿ ಹೆಣೆಯಲ್ಪಟ್ಟಿರುವವು. ಈ ಛಂದೋಭಿಮಾನಿ ದೇವತೆಗಳ ಒಟ್ಟನ್ನೇ ಸರಸ್ವತಿಯೆನ್ನುವೆವು. ವೇದಸರಸ್ವತಿಯನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವವರೇ ಋಷಿಗಳು. ಹೀಗೆ ನದಿಗೂ, ವೇದಕ್ಕೂ ಋಷಿಗಳಿಗೂ ಯಾವಾಗಲೂ ಅವಿನಾಭಾವಸಂಬಂಧವಿದೆ. ಆದ್ದರಿಂದ ವೇದವಾಕ್ಕುಗಳಿಂದ ನದೀರೂಪಳಾದ ಸರಸ್ವತಿಯನ್ನು ಇಲ್ಲಿ ಋಷಿಯು ಸ್ತುತಿಸಿರುತ್ತಾನೆ. ಅಧ್ಯಾತ್ಮವಾಗಿ ವಾಗ್ರೂಪಳಾಗಿಯೂ ಅಧಿಭೂತವಾಗಿ ನದೀರೂಪಳಾಗಿಯೂ ಅಧಿದೈವವಾಗಿ ಸರಸ್ವತಿಯೂ ಆಗಿರುವವಳು ನನ್ನ ಸ್ತೋತ್ರಕ್ಕೆ ಪಾತ್ರಳಾಗಲಿ– ಎಂದಭಿಪ್ರಾಯ.

———

# ಗುರುಶಿಷ್ಯಸಂವಾದ

**ಶಿಷ್ಯ :** ಗುರುಗಳೆ, ಈ ಹಿಂದೆ ತಾವು ತಿಳಿಸಿದ ಗ್ರಹದೇವತೆಗಳ ಪೂಜಾ ವಿಚಾರವು ಬೋಧಪ್ರದವಾಗಿತ್ತು. ಆದರೆ ನವಗ್ರಹಗಳ ಆರಾಧನೆಯನ್ನು ಈಗ ಜನರು ಶ್ರೌತಯಾಗಾದಿಕರ್ಮಗಳಿಗಿಂತ ಹೆಚ್ಚಾಗಿ ಮಾಡುತ್ತಿರುವದರಿಂದ, ಹಾಗೂ ಅಲ್ಲಲ್ಲಿ ನವಗ್ರಹದೇವಾಲಯಗಳನ್ನೂ ಸ್ಥಾಪಿಸಿ ಆರಾಧಿಸುತ್ತಿರುವದರಿಂದ ಈ ಗ್ರಹ ದೇವತೆಗಳ ಸ್ವರೂಪವನ್ನು ವಿವರವಾಗಿ ತಿಳಿಯಬಯಸುತ್ತೇನೆ. ಹಾಗೂ ದೇವತೆ ಗಳಿಗೂ ಶರೀರಾದಿಗಳು ಉಂಟೆ ? ಎಂಬಿದನ್ನೂ ತಿಳಿಸೋಣವಾಗಲಿ.

**ಗುರು :** ಆಗಬಹುದು. ದೇವತೆಗಳಿಗೆ ಶರೀರಾದಿಗಳು ಉಂಟೆಂದು ಇತಿಹಾಸ ಪುರಾಣಗಳಿಂದ ತಿಳಿದುಬರುವದರಿಂದ ಒಪ್ಪಬೇಕೆಂದು ಶ್ರೀಶಂಕರಾಚಾರ್ಯರು ಬ್ರಹ್ಮಸೂತ್ರಭಾಷ್ಯದಲ್ಲಿ ದೇವತಾಧಿಕರಣದಲ್ಲಿ ತಿಳಿಸಿರುತ್ತಾರೆ. ಮತ್ತು ಸ್ಕಾಂದ ಪುರಾಣದಲ್ಲಿ ಈ ಗ್ರಹದೇವತೆಗಳ ಜನ್ಮಭೂಮಿ, ಗೋತ್ರ, ಶರೀರಾವಯವಗಳು, ವರ್ಣ, ಆಯುಧಾದಿಗಳು- ಮುಂತಾದ ವಿವರಗಳನ್ನು ತಿಳಿದೇ ಆರಾಧನ, ಜಪ, ಹೋಮಾದಿಗಳನ್ನು ಆಚರಿಸಬೇಕೆಂದು ಹೇಳಿದೆ. ಹೇಗೆ ಒಂದು ಸಮಾರಂಭವು ನಡೆಯುವಾಗ ಮುಖ್ಯ ಅತಿಥಿಗಳು ಯಾರೆಂಬುದನ್ನು ಸಭಿಕರಿಗೆ ಪರಿಚಯಮಾಡಿ ಕೊಡುವ ಕಾರ್ಯಕ್ರಮವಿರುವದೋ ಹಾಗೆಯೇ ಗ್ರಹದೇವತೆಗಳನ್ನು ಪೂಜಿಸುವ ಭಕ್ತರಿಗೂ ಆಯಾ ದೇವತೆಯ ಪರಿಚಯವನ್ನು ಮಾಡಿಕೊಡುವ ಗ್ರಂಥಗಳಿವೆ. ಈ ಪರಿಚಯವಿವರಗಳನ್ನೆಲ್ಲ ಬಹಳಮಟ್ಟಿಗೆ ಪುರಾಣಾದಿಗಳಲ್ಲಿಯೂ ನಿಬಂಧಗ್ರಂಥ ಗಳಲ್ಲಿಯೂ ತಿಳಿಸಿರುತ್ತದೆ. ಈಗ ಇಂಥ ಶಾಸ್ತ್ರೀಯಗ್ರಂಥಗಳನ್ನು ಅಧ್ಯಯನ ಮಾಡಿರುವವರೂ ವಿವರಗಳನ್ನು ತಿಳಿಯಲಿಚ್ಛೆಯುಳ್ಳವರೂ ವಿರಳಾಗಿರುತ್ತಾರೆ. ಆದ್ದರಿಂದ ಇಂಥ ವಿಷಯಗಳು ಹೆಚ್ಚು ಪ್ರಚಾರದಲ್ಲಿರುವದಿಲ್ಲ.

**ಶಿಷ್ಯ :** ಚಿಂತೆಯಿಲ್ಲ. ಆಸಕ್ತರಿಗಾದರೂ ಪ್ರಯೋಜನವಾಗುವಂತೆ ಲಘು ವಾಗಿಯಾದರೂ ತಾವು ಗ್ರಹಗಳ ದೇವತಾಸ್ವರೂಪಗಳನ್ನು ತಿಳಿಸೋಣವಾಗಬೇಕು.

**ಗುರು :** ಕೇಳು ; ಸೂರ್ಯನು ಗ್ರಹಗಳ ರಾಜನು. ಇವನ ಸ್ವರೂಪವು ಹೀಗಿದೆ- ಎಂದು ಚಿಂತಿಸಬೇಕು. ಈತನು ಕಳಿಂಗದೇಶದಲ್ಲಿ ಹುಟ್ಟಿರುವನು. ಕಾಶ್ಯಪಗೋತ್ರಜನು. ವಿಶ್ವಾಮಿತ್ರಋಷಿಪೂಜಿತನು. ವಿಶಾಖಾನಕ್ಷತ್ರದಲ್ಲಿ ಜನಿ ಸಿರುವನು. ತ್ರಿಷ್ಟುಪ್ ಎಂಬ ಛಂದಸ್ಸುಳ್ಳವನು. ಕಪಿಲನೆಂಬ ಹೆಸರಿನ ಅಗ್ನ್ಯು ಪಾಸಕನು. ಪದ್ಮಾಸನದಲ್ಲಿ ಕುಳಿತು, ತಾವರೆಯ ಬಣ್ಣದವನಾಗಿದ್ದು, ಎರಡು ತೋಳುಗಳುಳ್ಳವನಾಗಿರುವನು. ಕೆಂಪುವಸ್ತ್ರವನ್ನುಟ್ಟು ಕಿರೀಟಧಾರಿಯಾಗಿ ಕೆಂಪು ಬಣ್ಣದ ರಥವನ್ನೇರಿ ಅದೇ ಬಣ್ಣದ ಛತ್ರಿ, ಬಾವುಟ, ಪತಾಕೆಗಳುಳ್ಳವನಾಗಿರು ವನು. ಹಸಿರುಬಣ್ಣದ ಏಳು ಕುದುರೆಗಳು ಇವನ ರಥವನ್ನೆಳೆಯುವವು. ಮೇರು ಪರ್ವತಕ್ಕೆ ಪ್ರದಕ್ಷಿಣಾಕಾರವಾಗಿ ತಿರುಗುತ್ತಿರುವವನು. ಇವನ ಬಲಭಾಗದಲ್ಲಿ ಅಗ್ನಿಯೂ ಎಡಭಾಗದಲ್ಲಿ ರುದ್ರನೆಂಬ ದೇವತೆಯೂ ಇರುವರು. ಇಂಥ ಸೂರ್ಯ

ನನ್ನು ಆರಾಧಿಸಿ ಈ ಶ್ಲೋಕವನ್ನು ಜಪಿಸಬೇಕು. "ಪದ್ಮಾಸನಃ ಪದ್ಮಕರೋ ದ್ವಿಬಾಹುಃ ಪದ್ಮದ್ಯುತಿಃ ಸಪ್ತತುರಂಗವಾಹನಃ। ದಿವಾಕರೋ ಲೋಕಗುರುಃ ಕಿರೀಟೀ ಮಯಿ ಪ್ರಸಾದಂ ವಿದಧಾತು ದೇವಃ ॥" ಇನ್ನೂ ಹೆಚ್ಚಿನ ವಿವರಗಳಿಗೆ ಆಯಾ ಮೂಲಗ್ರಂಥಗಳನ್ನೇ ಅಧ್ಯಯನಮಾಡಬೇಕಾಗುವದು.

**ಶಿಷ್ಯ :** ಗುರುಗಳೆ, ಈಗ ತಾವು ಕೊಟ್ಟಿರುವ ವಿವರಗಳು ಸಾಕು. ಇದೇ ರೀತಿಯಾಗಿ ದಯವಿಟ್ಟು ಉಳಿದ ಎಂಟು ಗ್ರಹದೇವತೆಗಳ ವಿಷಯದಲ್ಲಿಯೂ ತಿಳಿಸೋಣವಾಗಬೇಕು.

**ಗುರು :** ಕೇಳು : ಎರಡನೆಯ ಗ್ರಹವಾದ ಚಂದ್ರದೇವತೆಯನ್ನು ಕುರಿತು ಈ ಕೆಳಗಿನ ವಿವರಗಳಿವೆ. ಈತನು ಯಮುನಾತೀರದಲ್ಲಿ ಹುಟ್ಟಿರುವನು. ಆತ್ರೇಯ ಗೋತ್ರನೂ ಅದೇ ಋಷಿಯಿಂದ ಅರ್ಚಿತನೂ ಆಗಿರುವನು. ಕೃತ್ತಿಕಾನಕ್ಷತ್ರ ದಲ್ಲಿ ಜನಿಸಿರುವನು. ಗಾಯತ್ರೀಛ್ಛಂದಸ್ಕನು. ಪಿಂಗಳಾಗ್ನಿಯ ಉಪಾಸಕನು. ಎರಡು ಭುಜಗಳುಳ್ಳವನಾಗಿ ಗದೆಯನ್ನೂ ಅಭಯಮುದ್ರೆಯನ್ನೂ ಧರಿಸಿರುವನು. ಬಿಳುಪಾದ ಹೂಮಾಲೆ, ವಸ್ತ್ರಗಂಧಗಳನ್ನೂ ಮುತ್ತಿನ ಆಭರಣಗಳನ್ನೂ ತೊಟ್ಟಿರು ವನು. ಕಿರೀಟವನ್ನು ಧರಿಸಿ ಮೂರು ಗಾಲಿಗಳ ಬಿಳಿಬಣ್ಣದ ರಥವನ್ನೇರಿ ಅದೇ ಬಣ್ಣದ ಧ್ವಜಪತಾಕೆಗಳಿಂದ ಶೋಭಿಸುತ್ತಾ ನೀರಿನಲ್ಲಿ ಹುಟ್ಟಿರುವ ಹತ್ತು ಕುದುರೆ ಗಳಿಂದ ಕೂಡಿರುವ ರಥದಲ್ಲಿ ಕುಳಿತು ಮೇರುಪರ್ವತವನ್ನು ಪ್ರದಕ್ಷಿಣೆಮಾಡು ತ್ತಿರುವನು. ಈತನ ಬಲಭಾಗದಲ್ಲಿ ಅಪ್ದೇವತೆಗಳೂ ಎಡಭಾಗದಲ್ಲಿ ಗೌರಿಯೂ ಇರುವಳು. ಇಂಥ ಚಂದ್ರದೇವತೆಯನ್ನು ಆರಾಧಿಸಿ ಈ ಶ್ಲೋಕವನ್ನು ಜಪಿಸಬೇಕು. "ಶ್ವೇತಾಂಬರಃ ಶ್ವೇತವಿಭೂಷಣಶ್ಚ ಶ್ವೇತದ್ಯುತಿರ್ದಂಡಧರೋ ದ್ವಿಬಾಹುಃ। ಚಂದ್ರೋಽಮೃತಾತ್ಮಾ ವರದಃ ಕಿರೀಟೀ ಶ್ರೇಯಾಂಸಿ ಮಹ್ಯಂ ವಿದಧಾತು ದೇವಃ"

**ಶಿಷ್ಯ :** ದಯಮಾಡಿ ಅಂಗಾರಕದೇವತೆಯನ್ನೂ ಪರಿಚಯಮಾಡಿ ಕೊಡೋಣವಾಗಲಿ.

**ಗುರು :** ಕೇಳು. ಈತನು ಭೂದೇವಿಯ ಮಗನು. ಅವಂತೀದೇಶದಲ್ಲಿ ಹುಟ್ಟಿರುವನು. ಭಾರದ್ವಾಜಗೋತ್ರದವನು. ಜಮದಗ್ನಿಪೂಜಿತನು. ಗಾಯತ್ರೀ ಛ್ಛಂದಸ್ಕನು. ಧೂಮಕೇತುವೆಂಬ ಅಗ್ನಿಪೂಜಕನು. ಚತುರ್ಭುಜನು. ಖಡ್ಗ-ಶೂಲ-ಶಕ್ತಿ-ಗದೆಗಳನ್ನು ಧರಿಸಿರುವನು. ಕೆಂಪುವಸ್ತ್ರವನ್ನುಟ್ಟು ಹೊಂಬಣ್ಣದ ರಥವನ್ನೇರಿರುವನು. ಕೆಂಪು-ಧ್ವಜಪತಾಕಾದಿಗಳಿಂದ ವಿಭೂಷಿತನು. ಅಗ್ನಿಯಿಂದ ಹುಟ್ಟಿದ ಎಂಟು ಕೆಂಪುಕುದುರೆಗಳು ಇವನ ರಥವನ್ನೆಳೆಯುವವು. ಕೆಂಪು ರತ್ನ-ಹವಳಗಳ ಆಭರಣವುಳ್ಳವನು. ಮೇಷವಾಹನನು. ಇವನ ಬಲದಲ್ಲಿ ಭೂದೇವಿ ಯೂ ಎಡಗಡೆ ಕ್ಷೇತ್ರಪಾಲನೆಂಬ ದೇವತೆಯೂ ಇರುವರು. ಧ್ಯಾನಶ್ಲೋಕ : "ರಕ್ತಾಂಬರೋ ರಕ್ತವಪುಃ ಕಿರೀಟೀ ಚತುರ್ಭುಜೋ ಮೇಷಗಮೋ ಗದಾಭೃತ್। ಧರಾಸುತಃ ಶಕ್ತಿಧರಶ್ಚ ಶೂಲೀ ಸದಾ ಮಮ ಸ್ಯಾದ್ವರದಃ ಪ್ರಶಾಂತಃ ॥

# ಹೇಳುವದು, ಮಾಡುವದು

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಈಗಿನ ಕಾಲದಲ್ಲಿ ದಿನದಿನಕ್ಕೂ ಹೊಟ್ಟೆಬಟ್ಟೆಗಳ ವಿಚಾರದಲ್ಲಿಯೂ ಮನಸ್ಸಿನ ನೆಮ್ಮದಿಯ ವಿಚಾರದಲ್ಲಿಯೂ ಜನರಿಗೆ ಬಹಳ ಯೋಚನೆಯು ಆಗುತ್ತಿರುತ್ತದೆ. ಪ್ರತಿಯೊಂದು ರಾಷ್ಟ್ರದಲ್ಲಿಯೂ ನಾವು ಹೇಗೆ ನಡೆದುಕೊಂಡರೆ ನಮಗೆ ಶಾಂತಿಸುಖಗಳು ದೊರಕಿಯಾವು ? ಎಂಬ ಯೋಚನೆಯು ಪ್ರಜೆಗಳಿಗೂ ಸರಕಾರದವರಿಗೂ ಬಲವಾಗಿ ಹತ್ತಿಕೊಂಡಿರುತ್ತದೆ.

ಸುಖಶಾಂತಿಗಳು ದೊರಕಬೇಕಾದರೆ ದುಃಖವಿಕ್ಷೇಪಗಳು ಇಲ್ಲದಂತೆ ಆಗಬೇಕಷ್ಟೆ ? ನಮಗೆ ದುಃಖವಿಕ್ಷೇಪಗಳು ಯಾರೋ ಮತ್ತೊಬ್ಬರಿಂದ ಆಗುತ್ತವೆಯೆಂದು ನಮ್ಮೆಲ್ಲರ ಗಟ್ಟಿಯಾದ ನಂಬಿಕೆ. ಆದ್ದರಿಂದ 'ಹಿಂಸೆಮಾಡಬಾರದು' 'ಜಗಳವಾಡಬಾರದು', 'ಪರಸ್ಪರ ಸೌಹಾರ್ದದಿಂದಿರೋಣ', 'ಎಲ್ಲರಿಗೂ ಸುಖಶಾಂತಿಗಳು ಬೇಕು'–ಎಂದು ಒಬ್ಬರಿಗೊಬ್ಬರು ಬೋಧೆಮಾಡುತ್ತೇವೆ. "ಹೀಗೆ ಮಾಡುವದು ಪಾಪಕರ, ದೇವರು ಮೆಚ್ಚುವಂತೆ ನಡೆದುಕೊಳ್ಳಬೇಕು" ಎಂದೂ ಉಪದೇಶಿಸುತ್ತಿದ್ದೇವೆ. ರಾಷ್ಟ್ರಗಳೂ ಅಷ್ಟೇ. ಅವರೂ ಪರರಾಷ್ಟ್ರಗಳವರಿಗೆ "ನೀವು ನಿಮ್ಮ ನೀತಿಯನ್ನು ತಿದ್ದಿಕೊಳ್ಳಬೇಕು; ನಾವೆಲ್ಲರೂ ಅನ್ಯೋನ್ಯಮೈತ್ರಿಯಿಂದಿದ್ದರೆ ಲೋಕಕ್ಕೆಲ್ಲ ಶಾಂತಿಸುಖಗಳು ದೊರೆಯುತ್ತವೆ" ಎಂದು ಬೋಧಿಸುತ್ತಿರುತ್ತವೆ.

ಆದರೆ ನಮ್ಮ ನುಡಿಗಿಂತ ನಡೆಯು ಬೇರೆಯೇ ಆಗಿರುತ್ತದೆ. "ಮತ್ತೊಬ್ಬರಿಗೆ ಯಾವ ತೊಂದರೆಯಾದರೂ ಆಗಲಿ, ನನ್ನ ಹೊಟ್ಟೆಬಟ್ಟೆಗಳನ್ನು ನೋಡಿಕೊಳ್ಳಬೇಕು, ನನ್ನ ಹಣಕಾಸನ್ನು ಭದ್ರಪಡಿಸಿಕೊಳ್ಳಬೇಕು, ನಮ್ಮಮೇಲೆ ಯಾರೂ ಬೀಳದಂತೆ ಎಚ್ಚರಿಕೆಯಿಂದಿರಬೇಕು" ಎಂಬುದೇ ನಮ್ಮ ಮನಸ್ಸಿನ ಭಾವನೆ. ರಾಷ್ಟ್ರಗಳೂ ಅಷ್ಟೇ. "ನಮ್ಮ ದೇಶವು ಸುಭಿಕ್ಷವಾಗಿರಬೇಕು. ಸಂಪತ್ತಿನಿಂದ ತುಂಬಿತುಳುಕಾಡುತ್ತಿರಬೇಕು. ಮಿಕ್ಕ ದೇಶದವರ ಪಾಡು ನಮಗೇಕೆ ? ನಮ್ಮ ಮೇಲೆ ಯಾರೂ ಬೀಳದಂತೆ ನೋಡಿಕೊಳ್ಳೋಣ. ಸೈನ್ಯವನ್ನು ಹೆಚ್ಚಿಸೋಣ, ವಿಷಭರಿತಶಸ್ತ್ರಾಸ್ತ್ರಗಳನ್ನು ರಾಶಿಹಾಕಿಕೊಳ್ಳೋಣ ; ಆಮೇಲೆ ನಮಗೆ ಯಾರ ಅಂಜಿಕೆಯೂ ಇಲ್ಲ" ಎನ್ನುತ್ತಿವೆ.

ಈ ಸಂದರ್ಭದಲ್ಲಿ ನಮ್ಮೆಲ್ಲರ ಹೃದಯದಲ್ಲಿಯೂ ಸಾಕ್ಷಿಯಾಗಿದ್ದುಕೊಂಡು ನೋಡುತ್ತಿರುವ ಭಗವಂತನು ನಮ್ಮನ್ನು ಕುರಿತು ಏನನ್ನುತ್ತಿರಬಹುದು ? ನಮ್ಮ ನಡೆ-ನುಡಿಗಳಲ್ಲಿ ಐಕ್ಯತೆಯನ್ನು ನಾವು ಕಾಣುವದೆಂದು ? ನುಡಿದಂತೆ ನಡೆಯುವಂತೆಯೂ ಮಾಡೆಂದು ಹೃತ್ಪೂರ್ವಕವಾಗಿ ನಾವೆಲ್ಲರೂ ಆ ಭಗವಂತನಲ್ಲಿ ಬೇಡಿಕೊಳ್ಳಬೇಕಲ್ಲವೆ ?

———

# ಪ್ರಸ್ಥಾನತ್ರಯಭಾಷ್ಯಗಳು

ಅಧ್ಯಾತ್ಮಪ್ರಕಾಶಕಾರ್ಯಾಲಯದವರು ಕಳೆದ ಐದು ವರ್ಷಗಳಿಂದಲೂ ಪ್ರಯತ್ನಮಾಡಿ ಮಹಾಜನರ ಉದಾರ ಧನಸಹಾಯದಿಂದ ಈ ಹಿಂದೆ ಜಯಚಾಮ ರಾಜೇಂದ್ರಗ್ರಂಥರತ್ನಮಾಲೆಯಲ್ಲಿ ಪ್ರಕಾಶಿತವಾಗಿ–ಪ್ರತಿಗಳೆಲ್ಲ ಮುಗಿದುಹೋಗಿದ್ದ **ಶಾಂಕರಪ್ರಸ್ಥಾನತ್ರಯಭಾಷ್ಯಗಳನ್ನು** ಪುನರ್ಮುದ್ರಣಮಾಡಿಸಿ ಈಗ ಸಂಪೂರ್ಣವಾಗಿ ಹೊರತಂದಿರುತ್ತಾರೆ. ಕನ್ನಡಿಗರ ಸುದೈವದಿಂದ ಈ ಗ್ರಂಥಗಳು ಈಗ ಪೂರ್ಣವಾಗಿ ಸೆಟ್‌ಗಳಾಗಿ ದೊರೆಯುತ್ತಿವೆ. **ಇವು ಬ್ರಹ್ಮೀಭೂತ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ ಕನ್ನಡ ಅನುವಾದ ಟಿಪ್ಪಣಿ, ಪೀಠಿಕೆ, ಶಬ್ದಕೋಶಗಳಿಂದ ಅಲಂಕೃತವಾಗಿವೆ.** ವಿವರಗಳು ಕೆಳಗೆ ಕಂಡಂತೆ ಇವೆ.

| | | ಪುಟಗಳು | ಬೆಲೆ |
|---|---|---|---|
| ೧. | ಈಶಾವಾಸ್ಯೋಪನಿಷದ್ಭಾಷ್ಯ | 72 | ರೂ. 4-00 |
| ೨. | ಕೇನೋಪನಿಷದ್ಭಾಷ್ಯ | 118 | 8-00 |
| ೩. | ಕಾಠಕೋಪನಿಷದ್ಭಾಷ್ಯ | 228 | 10-00 |
| ೪. | ಮುಂಡಕೋಪನಿಷದ್ಭಾಷ್ಯ | 188 | 10-00 |
| ೫. | ಪ್ರಶ್ನೋಪನಿಷದ್ಭಾಷ್ಯ | 186 | 10-00 |
| ೬. | ಮಾಂಡೂಕ್ಯೋಪನಿಷದ್ಭಾಷ್ಯ | 424 | 20-00 |
| ೭. | ಐತರೇಯೋಪನಿಷದ್ಭಾಷ್ಯ | 146 | 8-00 |
| ೮. | ತೈತ್ತಿರೀಯೋಪನಿಷದ್ಭಾಷ್ಯ | 356 | 12-00 |
| ೯. | ಛಾಂದೋಗ್ಯೋಪನಿಷದ್ಭಾಷ್ಯ | 1158 | 120-00 |
| ೧೦. | ಬೃಹದಾರಣ್ಯಕೋಪನಿಷದ್ಭಾಷ್ಯ (೨ ಸಂಪುಟಗಳು) | 1828 | 200-00 |
| ೧೧. | ಭಗವದ್ಗೀತಾಭಾಷ್ಯ | 1048 | 60-00 |
| ೧೨. | ಬ್ರಹ್ಮಸೂತ್ರಭಾಷ್ಯ (೨ ಸಂಪುಟಗಳು) | 2020 | 150-00 |
| | | | ರೂ. 612-00 |

**ವಿಶೇಷ :** ಬ್ರಹ್ಮಸೂತ್ರಭಾಷ್ಯ, ಬೃಹದಾರಣ್ಯಕೋಪನಿಷದ್ಭಾಷ್ಯ, ಛಾಂದೋಗ್ಯೋಪನಿಷದ್ಭಾಷ್ಯಗಳನ್ನು ಅಂದವಾದ ರಕ್ಷಾಕವಚ, ಪ್ಲಾಸ್ಟಿಕ್ ಹೊದಿಕೆಗಳಿಂದ ಅಲಂಕರಿಸಿದೆ. ಒಂದು ಪೂರ ಸೆಟ್ಟನ್ನು ಒಟ್ಟಿಗೆ ಕೊಳ್ಳುವವರಿಗೆ **ಕೇವಲ 500-00 ರೂಗಳಿಗೆ** ಕೊಡಲಾಗುವದು. ಅಂಚೆವೆಚ್ಚ– ಮುಂತಾದವುಗಳನ್ನು ನಾವೇ ಭರಿಸುವೆವು. ಹೆಚ್ಚಿನ ವಿವರಗಳಿಗೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಕಾರ್ಯದರ್ಶಿ,
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ.

---

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನಮಹಾಪೋಷಕರುಗಳು:** ಶ್ರೀ॥ MPN. 924. ಕೆ. ಜಿ. ನಂಜುಂಡಸ್ವಾಮಿಯವರು, ಹೊಳೆನರಸೀಪುರ 925. ಹೆಚ್.ಜಿ. ನಾಗಭಾನುರವರು, ಹೊಳೆನರಸೀಪುರ ; 926. ಎಸ್. ಆಡವಯ್ಯನವರು, ಹೊಳೆನರಸೀಪುರ; 927. ಶ್ರೀಮತಿ ಗಾಯತ್ರಿಬಾಲುರವರು, ಬೆಂಗಳೂರು; 9೭8. ಹೆಚ್.ಆರ್.ಎಸ್. ರಾವ್‌ರವರು, ಬೆಂಗಳೂರು ; 929. ಎಸ್.ಕೆ. ಪ್ರಭಾಕರ್‌ರವರು, ಅಯನೂರು (ಶಿವಮೊಗ್ಗ) ; 930. ಹೆಚ್. ಕೆ. ಜನಾರ್ದನಶೆಟ್ಟರು, ಹೊಳೆನರಸೀಪುರ– ಈ ಮಹಾಶಯರುಗಳು ರೂ. ೧೫೧ ರಂತೆ ಮಹಾಪೋಷಣದ್ರವ್ಯವನ್ನು ಕೊಟ್ಟು ಪ್ರೋತ್ಸಾಹಿಸಿದ್ದಾರೆ. MPO. 498. ಶ್ರೀ ಹೆಚ್. ಎಲ್. ರಂಗಪ್ಪಶೆಟ್ಟರು, ಹೊಳೆನರಸೀಪುರ– ರೂ. ೫೦ನ್ನು ಹೆಚ್ಚಿಗೆ ಕೊಟ್ಟಿದ್ದಾರೆ.

1986ನೇ ಜುಲೈ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :—

**ಗ್ರಂಥಪ್ರಕಟನೆಗೆ :** ದಿವಂಗತ ಬೇಲೂರು ಚೆನ್ನಮ್ಮನವರ ಬಾಬ್ತು (ಬಂಧುಗಳ ಮೂಲಕ) ರೂ. ೩೦೦೦ ; ಶ್ರೀ ಸ್ವಾಮಿ ಕೃಷ್ಣಾನಂದರು, ಋಷೀಕೇಶ್ –ಇವರಿಂದ ರೂ. ೨೫ ; ಎಸ್.ಸಿ. ರಾಮಕೃಷ್ಣ, ಬೆಂಗಳೂರು ರೂ. ೫೦ ; ಶ್ರೀಮತಿ ಕೆ.ವಿ. ಮಂಗಳಾಂಬ, ಚಿತ್ರದುರ್ಗ ರೂ. ೨೫– ಒಟ್ಟು ರೂ. ೩೧೦೦.

**ಗುರುಮಂದಿರನಿಧಿಗೆ :** ಯಾದಾಳಂ ವಂಶೀಕರು, ಬೆಂಗಳೂರು ರೂ. ೧೦; ಒಬ್ಬ ಭಕ್ತರು; ತಿಪಟೂರು ರೂ. ೫೦– ಒಟ್ಟು ರೂ. ೬೦.

**ಅತಿಥಿಸತ್ಕಾರನಿಧಿಗೆ :** ಡಾ॥ ಹೆಚ್. ಹಿರಣ್ಣಯ್ಯನವರು, ಹುಳಿಸಂದ್ರ ರೂ. ೧೦.

**ಪೂಜಾಮಂದಿರನಿಧಿಗೆ :** ಯಾದಾಳಂ ವಂಶೀಕರು ರೂ. ೧೫ ; ವೈ. ಎಸ್. ಗುಂಡಪ್ಪನವರು, ಚಿಂತಾಮಣಿ ರೂ. ೧೦; ಒಬ್ಬ ಭಕ್ತರು, ತಿಪಟೂರು ರೂ.೫೦; ಒಟ್ಟು ರೂ. ೭೫.

**ಪೂಜಾಮಂದಿರ ಮೂಲನಿಧಿಗೆ :** ದಿವಂಗತ ಬೇಲೂರು ಚೆನ್ನಮ್ಮನವರ ಬಾಬ್ತು ರೂ. ೧೦೦೦.

**ಸಂನ್ಯಾಸಿಗಳ ಸತ್ಕಾರಕ್ಕೆ :** ಶ್ರೀಗಳಾದ : ಎನ್. ಎಲ್. ರಾಮಚಂದ್ರರವರು, ಮೈಸೂರು ರೂ. ೧೦; ಒಬ್ಬ ಭಕ್ತರು, ತಿಪಟೂರು ರೂ. ೧೦; ಬಿ.ಎಸ್. ಮುರಳೀಧರರವರು, ಬೆಂಗಳೂರು ರೂ. ೫೦ ; ಸೀತಮ್ಮನವರು, ಹೊಳೆನರಸೀಪುರ ರೂ. ೧೦ ; ಕೆ.ವಿ. ಲಲಿತಾಂಬರವರು, ಚಿತ್ರದುರ್ಗ ರೂ. ೧೦-ಒಟ್ಟು ರೂ. ೯೦.

**ಅನುಷ್ಠಾನಖಾತೆಗೆ :** ಶ್ರೀಮತಿ ಅಮ್ಮಯ್ಯಮ್ಮನವರು, ಹೊಳೆನರಸೀಪುರ (ಗುರುಪೂರ್ಣಿಮೆಗೆ) ರೂ. ೭೦.

**ಶ್ರೀಶ್ರೀ ಆರಾಧನಾನಿಧಿಗೆ :** ಎನ್. ಕೆ. ಗಣಪಯ್ಯನವರು, ಹಾರ್ಲೆ ರೂ. ೨೫೦; ಅರಕಲಗೂಡು ಭಾಗೀರಥಮ್ಮನವರು, ಹೊಳೆನರಸೀಪುರ ರೂ.೨೫೦; ಶಂಕರರಾವ್‌ರವರು, ಬೆಂಗಳೂರು ರೂ. ೩೨೦ ; ಎ. ತಾಂಡವೇಶ್ವರರವರು

ರೂ. ೧೨೫ ; ಜೆ. ಹನುಮಂತರಾವ್‌ರವರು, ಗುಂಟೂರು ರೂ. ೫೦ ; ಲಕ್ಷ್ಮೀ ಬಾಯಿಯವರು, ಬೆಂಗಳೂರು ರೂ. ೫೦ ; ಕೆ. ಎಸ್. ಶ್ರೀಕಂಠಯ್ಯನವರು, ಮೈಸೂರು ರೂ. ೩೦ ; ರಾಮಸ್ವಾಮಿ ಅವಧಾನಿಗಳು, ಮತ್ತೂರು ರೂ. ೩೦ ; ಎಸ್.ಆರ್. ಅಂಬುಜಮ್ಮನವರು, ಭದ್ರಾವತಿ ರೂ. ೫೦ ; ಹೆಚ್.ಎನ್. ರಾಮರಾವ್ ಪಾರ್ಟಿ, ಮೈಸೂರು ರೂ. ೩೩ ; **ರೂ. ೨೫ರಂತೆ ಕೊಟ್ಟವರು :** ಶ್ರೀ ಹೆಚ್. ವೆಂಕಟನರಸಪ್ಪನವರು, ಬೆಂಗಳೂರು ; ಎಂ. ಎಲ್. ಸತ್ಯನಾರಾಯಣ ರಾವ್, ಹೊಳೆನರಸೀಪುರ ; ಜಿ.ಎಸ್. ಸಾಂಬಶಿವಯ್ಯನವರು, ತಿಪಟೂರು ; ಎಸ್. ಗುಂಡಪ್ಪನವರು, ಹೊಳೆನರಸೀಪುರ; ಶ್ರೀಮತಿ ನಾಗಮ್ಮಶಂಕರರಾವ್, ಮೈಸೂರು; ಹೆಚ್.ಕೆ. ಸುಬ್ರಹ್ಮಣ್ಯಂ, ಬೆಂಗಳೂರು ; ಡಿ. ಹೆಚ್. ಪುಂಡಲೀಕರಾವ್, ಬೆಂಗಳೂರು ; **ರೂ. ೨೦ರಂತೆ** ಕೊಟ್ಟವರು : ಶ್ರೀಗಳಾದ ಗುರುಮೂರ್ತಿಗಳು, ಬೊಂಬಾಯಿ ; ರುಕ್ಮಿಣಮ್ಮನವರು, ಬೆಂಗಳೂರು ; ಕಲ್ಯಾಣಮ್ಮನವರು, ಹೊಳೆನರಸೀಪುರ ; ಹೆಚ್. ಎಲ್. ರಂಗಪ್ಪಶೆಟ್ಟರು, ಹೊಳೆನರಸೀಪುರ ; ಹೆಚ್. ಕೆ. ಚಂದ್ರಶೇಖರಯ್ಯನವರು, ತಿಪಟೂರು ; ಎಂ. ಹನುಮಂತರಾಯರು, ಆದವಾನಿ ; ರೂ. ೧೫ ಹಾಗೂ ಅದಕ್ಕಿಂತ ಕಡಿಮೆ ಕೊಟ್ಟವರ ಒಟ್ಟು ಮೊತ್ತ ರೂ. ೨೩೯ ; ಈ ರೀತಿ ಒಟ್ಟು ಮೊಬಲಗು ರೂ ೧೭೩೮.

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಅಭಿನಂದನೆಗಳು.

—— ——

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,**

**ನಂ. 68, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**

( ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು )

**1986ನೆಯ ಸೆಪ್ಟೆಂಬರ್ ಮಾಹೆಯಲ್ಲಿ ನಡೆಯುವ**

**ವಿಶೇಷ ಉಪನ್ಯಾಸಗಳು : ಶನಿವಾರ ಸಂಜೆ ಘಂ. 4 ರಿಂದ 5**
**ಭಾನುವಾರ ಸಂಜೆ ಘಂ. 5ರಿಂದ 6**

1. 6-9-86ನೆಯ ಶನಿವಾರ
ವೇ॥ಬ್ರ॥ಶ್ರೀ॥ ಎಂ. ಶ್ಯಾಮಣ್ಣನವರು **"ಗಣೇಶಚತುರ್ಥೀ"**

2. 7-9-86ನೆಯ ಭಾನುವಾರ
ವೇ॥ಬ್ರ॥ಶ್ರೀ॥ ಕೆ.ಜಿ. ಸುಬ್ರಾಯಶರ್ಮ M.A., **"ಸ್ಯಮಂತಕೋಪಾಖ್ಯಾನ"**

3. 13-9-86ನೆಯ ಶನಿವಾರ
ಡಾ॥ ಪಿ. ಎಸ್. ನಾರಾಯಣರಾವ್ **"ಶ್ರೀರಾಮಕೃಷ್ಣ ಉಪನಿಷತ್"**

4. 14-9-86ನೆಯ ಭಾನುವಾರ
ಕೆ. ಎಸ್. ನಾರಾಯಣರಾವ್ **"ಧ್ಯಾನ"**

5. 20-9-1986ನೆಯ ಶನಿವಾರ
ಶ್ರೀಮತಿ ಕನಕಲಕ್ಷ್ಮಿ ದಾನಿ ಮತ್ತು ಶ್ರೀಮತಿ ಪದ್ಮಾವೆಂಕಟೇಶ್ **"ಲವ-ಕುಶ"**

6. 21-9-86ನೆಯ ಭಾನುವಾರ
ಶ್ರೀ॥ ಎಸ್. ನಾಗರಾಜು, M.A., **"ದೂರ್ವಾಂಕುರಪ್ರಿಯ"**

7. 27-9-86ನೆಯ ಶನಿವಾರ
ಪ್ರೊ. ಬಿ. ಭೀಮಸೇನರಾವ್, M.Sc., **"ಶ್ರೀರಾಮಹೃದಯ"**

8. 28-9-86ನೆಯ ಭಾನುವಾರ
ವೇದವಿದ್ಯಾಭೂಷಣ ಕೆ. ಜಿ ಸುಬ್ರಾಯಶರ್ಮಾ, M.A.,
**"ಧರ್ಮಬ್ರಹ್ಮಮೀಮಾಂಸಾದರ್ಶನಗಳು"**

**ತಮಗೆಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
ತಾ॥ 1-9-1986.

**ಕೆ. ಜಿ. ಸುಬ್ರಾಯಶರ್ಮಾ,**
**ಕಾರ್ಯದರ್ಶೀ.**

Regd. No.
KRNI-5

# ADHYATMA Prakasha

Registered with the Registrar of News-papers
for India under No. R. N. 13244/57

## ಕೇಳಿರಿ

ವಿಶ್ವೈಶ್ವರ್ಯಕ್ಕೂ ಒಡೆಯನೂ ಆಪ್ತಕಾಮನೂ ಆದ ಪರಮಾತ್ಮನೆ ನಮ್ಮೆಲ್ಲರ ಆತ್ಮನು. ಆತನಿಗೆ ಶೋಕಮೋಹಾದಿಸಂಸಾರಧರ್ಮಗಳಿಲ್ಲ. ಅವನನ್ನು ಅರಿತುಕೊಳ್ಳದ ಮೂಢರು ತಮ್ಮನ್ನು ತಾವೇ ಅಲ್ಪರಾಗಿ ಭಾವಿಸಿಕೊಂಡು ಪರಿಮಿತವೂ ಆಗಮಾಪಾಯಿಯೂ ಅಸ್ವತಂತ್ರವೂ ಆದ ಸುಖಗಳಿಗೆ ಆಸೆಪಟ್ಟು ಪರಾಧೀನರಾಗಿ ಬಾಳಿ ಮತ್ತೆಮತ್ತೆ ಜನನಮರಣಗಳನ್ನೈದುವರು. ಅರಿತವರು ಸ್ವತಂತ್ರರಾಗಿ ಜೀವನ್ಮುಕ್ತರಾಗಿ ಆತ್ಮಸಾಮ್ರಾಜ್ಯಸುಖಭಾಗಿಗಳಾಗಿ [illegible]ರಾಗುವರು– ಎಂದು ಉಪನಿಷತ್ತು ತಿಳಿಸುತ್ತದೆ.

To.

Sri




M.P.O. - 414

Sri.J.Srinivasa Murthy
No.18 - II Cross - Kodandaram-
puram,
P.O. - Bangalore - 3.

Edited Printed & Published by H. S. Lakshminarasimha Murthy
as Secretary for The Adhyatma Prakasha Karyalaya,
At The Adhyatma Prakasha Press, Holenarsipur - 573211
6—9—1986